ಶಿಲ್ಪಕಲಾವಿದರ ಮಾಲೆ - ೬

# ಎನ್. ಜಿ. ನೀಲಕಂಠಾಚಾರ್

ಎಲ್. ಶಿವಲಿಂಗಪ್ಪ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ, ಕನ್ನಡ ಭವನ
ಜೆ. ಸಿ. ರಸ್ತೆ, ಬೆಂಗಳೂರು - ೫೬೦ ೦೦೨

**N. G. NEELAKANTACHAR :**
A Monograph By : **L. Shivalingappa**
Published By : **N. Marishamachar**
Registrar, Karnataka Shilpakala Academy
Ist Floor, Kannada Bhavana
J. C. Road, Bangalore - 560 002

ಮೊದಲ ಮುದ್ರಣ : ೨೦೦೧

ಪ್ರತಿಗಳು : ೧೦೦೦

ಸಂಪಾದಕ : ಎನ್. ಮರಿಶಾಮಾಚಾರ್

ಬೆಲೆ : ರೂ. ೧೫.೦೦

**ಫ್ರೆಂಡ್ಸ್ ಕಾಮ್-ಟೆಕ್**
೧೨೧/೧, ೫ನೇ ಮುಖ್ಯರಸ್ತೆ, ಚಾಮರಾಜಪೇಟೆ
ಬೆಂಗಳೂರು - ೫೬೦ ೦೧೮

# ಮೊದಲ ಮಾತು

ನಮ್ಮ ರಾಜ್ಯ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ನಮ್ಮ ರಾಜ್ಯದಲ್ಲಿ ಶಿಲ್ಪಕಲೆಗಾಗಿ ದುಡಿದವರು ಹಲವಾರು ಶಿಲ್ಪಿಗಳು. ಕೆಲವು ಶಿಲ್ಪಿಗಳು 'ಶಿಲ್ಪ ರಚಿಸುವುದೇ ತಮ್ಮ ಕಾಯಕ'ವೆಂದು ತಿಳಿದು, ಶಿಲ್ಪದ ಮೇಲೆ ತಮ್ಮ ಹೆಸರುಗಳನ್ನು ನಮೂದಿಸಿರುವುದಿಲ್ಲ. ಸಾಂಪ್ರದಾಯಿಕವಾಗಿ ಶಿಲ್ಪಕಲೆ ಬೆಳೆದು ಬಂದಿದ್ದು ಇಂದಿಗೂ ಈ ಕಲೆಗಳನ್ನು ಉಳಿಸಿ, ಬೆಳೆಸಿಕೊಂಡು ಬಂದಿರುವವರು ನಮ್ಮಲ್ಲಿದ್ದಾರೆ. ಅಕಾಡೆಮಿ ಇಂತಹ ಹಿರಿಯ ಶಿಲ್ಪಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸುವ ಯೋಜನೆಯನ್ನು ಪ್ರಾರಂಭಿಸಿದೆ. ಈ ಪುಸ್ತಕಗಳು ಈ ಶಿಲ್ಪಿಗಳ ಮತ್ತು ಕೃತಿಗಳ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಶಿಲ್ಪಕಲೆ ಬೆಳೆದು ಬಂದ ದಾರಿ ಮತ್ತು ಅದರ ಚರಿತ್ರೆಯನ್ನು ತಿಳಿಯಲು ಸಹಾಯಕವಾಗುವುದು.

ಈ ಯೋಜನೆಯಲ್ಲಿ ನಮ್ಮ ನಾಡಿನ ಹೆಸರಾಂತ ಶಿಲ್ಪಿಗಳಾದ ಶ್ರೀ ಎನ್. ಜಿ. ನೀಲಕಂಠಾಚಾರ್ ಅವರ ಬಗ್ಗೆ ಶ್ರೀ ಎಲ್. ಶಿವಲಿಂಗಪ್ಪ ಅವರು ಪುಸ್ತಕವನ್ನು ಬರೆದುಕೊಟ್ಟಿದ್ದಾರೆ. ಶ್ರೀಯುತರು ಶಿಲ್ಪಿಯ ಬಗ್ಗೆ ಚೆನ್ನಾಗಿ ಅರಿತಿದ್ದು, ಅವರ ಜೀವನ ಮತ್ತು ಕೃತಿಗಳ ಬಗ್ಗೆ ವಿವರವಾಗಿ ಬರೆದಿದ್ದಾರೆ. ಶ್ರೀಯುತರಿಗೆ ಅಕಾಡೆಮಿಯ ಪರವಾಗಿ ವಂದನೆಗಳನ್ನು ಸಲ್ಲಿಸುವೆ. ಅಕಾಡೆಮಿಯು ಕರ್ನಾಟಕ ಸರ್ಕಾರದ 'ಜಕಣಾಚಾರಿ' ಪ್ರಶಸ್ತಿ ಪಡೆದವರ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಲು ತೀರ್ಮಾನಿಸಿದೆ. ನಮ್ಮ ನಾಡಿನ ಜನರು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

ಸಿ. ಪರಮೇಶ್ವರಾಚಾರ್
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಲೇಖಕರ ನುಡಿ

ಇದುವರೆಗೆ ಮುದ್ರಣಗೊಂಡಿರುವ ಶಿಲ್ಪಿಗಳ ಅಥವಾ ಕಲಾವಿದರ ಪರಿಚಯ ಪುಸ್ತಕದಲ್ಲಿ ಆಯಾಯ ಶಿಲ್ಪಿಯ/ಕಲಾವಿದರ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ, ಸಾಧನೆ, ಸಂಗ್ರಹ ಮತ್ತು ಕಲಾಕೃತಿಗಳ ಔಪಚಾರಿಕ ವಿಮರ್ಶೆಯ ಜೊತೆಗೆ, ಗಳಿಸಿದ ಪ್ರಶಸ್ತಿ, ಪುರಸ್ಕಾರ, ಕುಟುಂಬದ ವಿವರಗಳಿರುವುದನ್ನು ಕಾಣುತ್ತೇವೆ.

ಆದರೆ ಪ್ರಸ್ತುತ ಈ ಪುಸ್ತಕದಲ್ಲಿ ಶ್ರೀ ನೀಲಕಂಠಾಚಾರ್ಯರ ಬದುಕಿನ ಸಮಗ್ರ ವಿವರಗಳ ಜೊತೆಗೆ ಮುಂದಿನ ಶಿಲ್ಪಾಭ್ಯಾಸಿಗಳಿಗೆ ಅಥವಾ ಲೋಹಶಿಲ್ಪವನ್ನು ಹೇಗೆ ಮಾಡುತ್ತಾರೆಂದು ತಿಳಿಯಬಯಸುವ ಹಂಬಲವುಳ್ಳವರಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಲೋಹಶಿಲ್ಪದ ಪ್ರಾಚೀನತೆ, ಶೈಲಿ, ಶಾಸ್ತ್ರ ಸಂಹಿತೆಗಳ ಸೂಕ್ಷ್ಮ ಪರಿಚಯ ಮಾಡುವುದರ ಜೊತೆಗೆ ಲೋಹಶಿಲ್ಪ ರಚನಾ ವಿಧಾನದ ಸೂಕ್ಷ್ಮಾತಿಸೂಕ್ಷ್ಮಗಳನ್ನು ಸಮಗ್ರವಾಗಿ ಪರಿಚಯಿಸುವ ಪ್ರಯತ್ನ ಮಾಡಲಾಗಿದೆ.

ಈ ದಿಸೆಯಲ್ಲಿ ಶ್ರೀಯುತ ನೀಲಕಂಠಾಚಾರ್ಯರು ತಮ್ಮ ಆಳವಾದ ಅನುಭವದ ಕೆಲಸದ ಒಳ ಮರ್ಮಗಳನ್ನು ಮನಬಿಚ್ಚಿ ಹೇಳುವ ಮೂಲಕ ಮುಂದಿನ ಶಿಲ್ಪಾಭ್ಯಾಸಿಗಳಿಗೆ ಒಂದು ದಾರಿದೀಪವಾಗಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ನೆನಕೆಗಳನ್ನು ಸಲ್ಲಿಸುತ್ತಾ, ಹಾಗೆಯೇ ಪುಸ್ತಕ ಪ್ರಕಟಿಸಲು ಅನುವಾದ ಅಧ್ಯಕ್ಷರಾದಿಯಾಗಿ ಎಲ್ಲಾ ಸದಸ್ಯರಿಗೂ ಹಾಗೂ ರಿಜಿಸ್ಟ್ರಾರ್ ಅವರಿಗೂ ನಮನಗಳನ್ನು ಸಲ್ಲಿಸಿ, ತರುಣ ಪೀಳಿಗೆಗೆ ಈ ಪುಸ್ತಕ ಲೋಹಶಿಲ್ಪ ರಚನೆಯಲ್ಲೊಂದು ಮಾರ್ಗದರ್ಶಿಯಾದರೆ, ಬರವಣಿಗೆಗೊಂದು ಸಾರ್ಥಕತೆ ದೊರಕಿದಂತಾಗುವುದೆಂದು ಭಾವಿಸುತ್ತೇನೆ.

ಎಲ್. ಶಿವಲಿಂಗಪ್ಪ

# ಅಪೂರ್ವ ಲೋಹಶಿಲ್ಪಿ ನೀಲಕಂಠಾಚಾರ್

ಶಿಲ್ಪಗಳು ವಿಗ್ರಹಗಳು ಎಂದೊಡನೆಯೇ ನಮಗೆ ತಟ್ಟನೆ ನೆನಪಾಗುವುದು ದೇವಾಲಯಗಳು. ಅದು ಬೇಲೂರು ಹಳೆಬೀಡಿನಂತಹ ಸೌಂದರ್ಯಾರಾದಕ ಶಿಲ್ಪವುಳ್ಳ ದೇವಾಲಯವಾಗಿರಬಹುದು ಅಥವಾ ಪ್ರತಿ ಬಡಾವಣೆಗಳಲ್ಲಿ ಕಾಣುವ ಕಿರು ದೇವಾಲಯಗಳಿರಬಹುದು. ಎಲ್ಲಾ ಕಡೆಯೂ ಎದ್ದು ಕಾಣುವುದು ಶಿಲಾಮೂರ್ತಿಯೇ. ಲೋಹದ ಮೂರ್ತಿಯಿಲ್ಲದ ದೇವಾಲಯ ಕಾಣಬಹುದು. ಆದರೇ ಶಿಲಾಮೂರ್ತಿ ಇಲ್ಲದ ದೇವಾಲಯವಿರುವುದಿಲ್ಲ. ಒಂದು ವೇಳೆ ಪೂಜೆಗೊಳ್ಳುವ ಮೂರ್ತಿ ಭಗ್ನಾವಶೇಷ ಗೊಂಡಿದ್ದರೂ ಸಹ ಆ ದೇವಾಲಯದ ವಾಸ್ತುಶಿಲ್ಪ. ಅವಕ್ಕೆ ಹೊಂದಿಕೆ ಆಗುವಂತಹ ನೂರಾರು ದೇವತಾಮೂರ್ತಿ ಶಿಲ್ಪ, ವಿವಿದ ಚಿತ್ರ ವಿನ್ಯಾಸವುಳ್ಳ ಶಿಲಾಪಟ್ಟಿಕೆಗಳು, ಸ್ತಂಭಗಳು, ಬೋದಿಗೆಗಳು, ಮೇಲ್ಮಾಡು ದ್ವಾರದ ಇಕ್ಕೆಲಗಳು, ದ್ವಜಸ್ತಂಭ ಎಲ್ಲವೂ ಕಲಾಮಯವಾಗಿರುತ್ತದೆ. (ಸೀಮೆಂಟು ಕಟ್ಟಡದ ದೇವಾಲಯ ಹೊರತು ಪಡಿಸಿ).

ಅಂದಮಾತ್ರಕ್ಕೆ ಲೋಹಶಿಲ್ಪಗಳಿಗೆ ನೆಲೆ ಇಲ್ಲ ಎಂದು ಭಾವಿಸಬಾರದು. ಲೋಹಶಿಲ್ಪಕ್ಕೆ ೫೦೦೦ ವರ್ಷಗಳ ಇತಿಹಾಸವಿದೆ. ಕ್ರಿ.ಪೂ.೩೫೦೦ರ ಸುಮಾರಿನಲ್ಲಿ ಮೆಸಪಟೋಮಿಯಾ ಜನರು ಕಂಚನ್ನು ಕಂಡುಹಿಡಿದರು. ಕ್ರಿ.ಪೂ.೪೦೦೦ಕ್ಕಿಂತಲೂ ಹಿಂದೆ ಮಾನವ ತಾಮ್ರ ಮತ್ತು ಚಿನ್ನಗಳ ಬಳಕೆ ಮಾಡುತ್ತಿದ್ದನೆಂದು ಗ್ರೀಕ್ ಭೂವೈಜ್ಞಾನಿಕ ಶಾಸ್ತ್ರ ತಿಳಿಸುತ್ತದೆ.

ಹರಪ್ಪ ಮಹಂಜೊದಾರೋ ಕಾಲದಲ್ಲಿಯೇ ಸಿಕ್ಕಿದ ಪಳಿಯುಳಿಕೆಗಳು ಲೋಹ ಶಿಲ್ಪವಿತ್ತೆಂಬುದಕ್ಕೆ ದಾಖಲೆ ಒದಗಿಸುತ್ತವೆ. ಭಾರತೀಯ ಪುರಾಣಗಳಾದ ರಾಮಾಯಣ ಮಹಾಭಾರತಗಳಲ್ಲಿ ಸಹ ಆಯುಧಗಳನ್ನು ಮಾಡುತ್ತಿದ್ದುದೇ ಲೋಹಗಳಿಂದ. ಕೆಲವು ಮುಖ್ಯ ಆಯುಧಗಳು, ಅವುಗಳ ಹಿಡಿಗಳು ಕವಚ ಇತ್ಯಾದಿಗಳು ಲೋಹದಿಂದ

ಮಾಡಿರುವುದಲ್ಲದೇ, ಅವುಗಳ ಮೇಲೆಲ್ಲಾ ಕುಸುರಿ ಕೆಲಸ ಮಾಡಿರುವುದನ್ನು ಭೂಗರ್ಭ ಸಂಶೋಧನೆ ಸಂದರ್ಭದಲ್ಲಿ ಸಿಕ್ಕ ಪಳಿಯುಳಿಕೆಗಳು ಸಾಬೀತು ಪಡಿಸುತ್ತವೆ.

ಕಾಶ್ಯಪ ಶಿಲ್ಪಶಾಸ್ತ್ರ, ಸಮರಾಂಗಣ ಸೂತ್ರದಾರ, ಮಾನಸಾರ, ಮುಂತಾದ ಶಿಲ್ಪ ಗ್ರಂಥಗಳಲ್ಲಿಯೂ ಲೋಹ ಶಿಲ್ಪದ ಉಲ್ಲೇಖ ದೊರಕುತ್ತದೆ. ಜೊತೆಗೆ ವರಾಹಮಿಹಿರನ ಬೃಹತ್ ಸಂಹಿತೆಯಲ್ಲಿಯೂ ಕೂಡಾ ಬಂಗಾರದ ಶಿಲ್ಪ ಸಕಲಾಭಿಷ್ಟವನ್ನು, ಬೆಳ್ಳಿಯ ಶಿಲ್ಪ ಯಶಸ್ಸನ್ನು, ತಾಮ್ರದ್ದು ಸಂತಾನವನ್ನು, ಕಲ್ಲಿನದು ಹೆಚ್ಚಿನ ಭೂಮಿಯನ್ನು ಒದಗಿಸುತ್ತದೆಂದು ಹೇಳಿದೆ. (ಶಿಲ್ಪಕಲಾಪ್ರಪಂಚ ಪು.೪೩.೨) ಆಧುನಿಕ ಯುಗದಲ್ಲಿಯೂ ಈ ಮನೋಧರ್ಮ ಬದಲಾಗಿಲ್ಲ. ಅನೇಕ ಶ್ರೀಮಂತರು ಸ್ವರ್ಣದ ಅಥವಾ ಬೆಳ್ಳಿಯ ಮೂರ್ತಿಯನ್ನು ಮಾಡಿಸಿಕೊಂಡು ಪೂಜಿಸಿದರೇ, ಬಡವರಾದವರು ಸಣ್ಣ ಸಣ್ಣ ಲೋಹ ಮೂರ್ತಿಗಳನ್ನು ಮಾಡಿಸಿಕೊಂಡು ಪೂಜಿಸುತ್ತಾರೆ. ಸಾಮಾನ್ಯವಾಗಿ ಪ್ರತಿ ಮನೆಯಲ್ಲಿಯೂ ಗಂಟೆ, ತಟ್ಟೆ, ಬಟ್ಟಲು ವಿವಿದ ವಿನ್ಯಾಸವುಳ್ಳ ಪೂಜಾಪರಿಕರಗಳನ್ನು ಲೋಹದಿಂದಲೇ ಮಾಡಿರುವುದನ್ನು ಕಾಣುತ್ತೇವೆ.

**ಮಿಶ್ರಲೋಹ** : ಶುದ್ಧವಾದ ಲೋಹ ಯಾವಾಗಲೂ ಮೆದುವಾಗಿರುತ್ತದೆ. ಕರಗುವ ಗುಣ ಅಧಿಕವಾಗಿರುತ್ತದೆ. ಇದನ್ನು ದುರ್ಬಲ ಲೋಹವೆಂದು ಕರೆಯುತ್ತಾರೆ. ಎಲ್ಲಾ ಲೋಹಗಳಿಗಿಂತ ಸೀಸ ಅತಿ ಭಾರವಾದ ಲೋಹವಾಗಿದೆ. ತಾಮ್ರ ಮತ್ತು ಸತುವಿನ ಮಿಶ್ರಣವೇ ಹಿತ್ತಾಳೆ. ತಾಮ್ರ ಮತ್ತು ತವರಗಳ ಮಿಶ್ರಣವೇ ಕಂಚು. ಜಾಡಿ ಮತ್ತು ಆಭರಣಗಳನ್ನು ತಯಾರಿಸುವುದಕ್ಕೆ ತವರ ಮತ್ತು ಸೀಸಗಳ ಮಿಶ್ರಣವಾದ ಫ್ಯೂಟರ್ ಬಳಸುತ್ತಾರೆ. ಸಾಲ್ಡರ್ ಸಹ ಮಿಶ್ರಲೋಹವೇ. ತಾಮ್ರದಲ್ಲಿ ಕಿಲುಬುವ ಗುಣ ಅತಿಯಾಗಿರುತ್ತದೆಯಾದ್ದರಿಂದ ತವರದ ಗಿಲಾವು ಪಾತ್ರೆಗಳಿಗೆ ಮಾಡಿಸುತ್ತಿದ್ದುದನ್ನು ನಾವು ಕಾಣುತ್ತೆವೆ. ಕ್ರೋಮಿಯಂ ನಿಕ್ಕಲ್‌ಗಳ ಮಿಶ್ರಣವೇ ಉಕ್ಕು (Stainless Steel) ಆಗಿದೆ. ಹೀಗೆ ಮಿಶ್ರಲೋಹದ ಬಳಕೆ ವ್ಯಾಪಕವಾಗಿದೆ. ಪಂಚಲೋಹದ ವಿಗ್ರಹವು ಸಹ ಮಿಶ್ರಣದ ಮೂಲಕವೇ ಆಗಿರುತ್ತದೆ.

**ಮೆರೆಯುವ ಮೂರ್ತಿ** : ದೇವಾಲಯಗಳಲ್ಲಿ ಮೂಲ ಮೂರ್ತಿಗಳನ್ನು ಹೊತ್ತು ಮೆರೆಸಲು ಸಾಧ್ಯವಿಲ್ಲವಾದ್ದರಿಂದ ಅದರ ಪ್ರತಿರೂಪದಂತಿರುವ ಲೋಹ ಶಿಲ್ಪಗಳನ್ನು ಮಾಡಿಸುವುದು ನಡೆದು ಬಂದ ಸಂಪ್ರದಾಯ. ಇವುಗಳಿಗೆ ಉತ್ಸವ ಮೂರ್ತಿಗಳೆಂದು ಕರೆಯುತ್ತಾರೆ. ಇತ್ತೀಚೆಗಂತೂ ಬಹುತೇಕ ದೇವಾಲಯಗಳು ವಾಣಿಜ್ಯಮಂದಿರಗಳಾಗಿರುವುದರಿಂದ (Commercial) ವಿವಿದ ರೀತಿಯ ಉತ್ಸವ

ಮೂರ್ತಿಗಳನ್ನು ಬೆಳ್ಳಿ ಅಥವಾ ಚಿನ್ನಗಳಿಂದ ಮಾಡಿಸಿ ಜೊತೆಗೆ ಪಾಲಕಿ, ಮಂಟಪ, ರಥಗಳನ್ನು ಮಾಡಿಸುವ ಮೂಲಕ ಇಂತಿಂತಹ ಮೂರ್ತಿ ಉತ್ಸವಕ್ಕೆ ಇಂತಿಷ್ಟು ಹಣ ಎಂಬುದಾಗಿ ನಿಗದಿಪಡಿಸಿ ಸಂಪಾದನೆಗೆ ದಾರಿ ಮಾಡಿ ಕೊಂಡಿದ್ದಾರೆ. ಅದೇನೆ ಇರಲಿ, ಲೋಹಶಿಲ್ಪ ರಚನೆಗೆ ಇದರಿಂದ ಪ್ರೋತ್ಸಾಹದಾಯಕವಾಗಿದೆಯೆಂಬುದಷ್ಟೆ ಸದ್ಯಕ್ಕೆ ಬೇಕಾದ ವಿಚಾರ.

**ಕಲಾಶೈಲಿ** : ಕಲಾಶೈಲಿ ಕುರಿತು ಹೇಳುವುದಾದರೇ ರಾಜಮನೆತನಗಳ ಇಚ್ಚೆ ಮತ್ತು ಪ್ರಾದೇಶಿಕವಾಗಿ ಸಿಗುವ ಕಲ್ಲು ಅಥವಾ ಲೋಹಗಳ ಪರಿಮಾಣಗಳಿಗೆ ಅನುಗುಣವಾಗಿ ಶೈಲಿಗಳು ಉದಯಿಸಿದವು. ಶಾತವಾಹನರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು ಗಂಗರು ನೊಳಂಬರು ಮತ್ತು ಹೋಯ್ಸಳರ ಕಾಲದ ಲೋಹ ಶಿಲ್ಪಗಳನ್ನು ಒಂದೊಂದು ಶೈಲಿಯೆಂದು ಗುರ್ತಿಸಬಹುದಾಗಿದೆ. ಚೋಳರ ಪ್ರಭಾವವಂತೂ ಕರ್ನಾಟಕದ ಮೇಲೆ ಆಗಾದವಾಗಿ ಆಗಿದೆ. ಕ್ರಿ.ಶಕ ೮೫೦ರಿಂದ ೧೨೭೫ರ ಅವದಿಯಲ್ಲಿ ಚೋಳರು ದಕ್ಷಿಣ ಭಾರತವನ್ನು ಆಳಿದ ಕಾಲದಲ್ಲಿ, ಚೋಳರು ತಂಜಾವೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತಮಿಳುನಾಡಿನಾದ್ಯಂತ ಸುಮಾರು ೪೦,೦೦೦ ದೇವಾಲಯ ನಿರ್ಮಿಸಿದರೆಂದು ತಿಳಿದು ಬರುತ್ತದೆ. ರಾಜ್ಯ ವಿಸ್ತಾರವು ಶ್ರೀಲಂಕಾ, ಜಾವಾ, ಸುಮಾತ್ರ, ಕಾಂಬೋಡಿಯಾ ಮಲಯ ದ್ವೀಪಗಳವರೆಗೆ ವಿಸ್ತರಿಸಿದ್ದು ಅಲ್ಲೆಲ್ಲಾ ಚೋಳರು ದೇವಾಲಯ ನಿರ್ಮಾಣ ಮಾಡಿ ಉತ್ಸವಾದಿಗಳಿಗೆ ಕಂಚಿನ ಮೂರ್ತಿಗಳನ್ನು ದಾನವಾಗಿ ಕೊಡುತ್ತಿದ್ದರೆಂದು ತಿಳಿದು ಬರುತ್ತದೆ.

೧೦ನೇ ಶತಮಾನದ ಚೋಳರ ರಾಣಿ ಸೇಂಬಿಯನ್ ಮಾದೇವಿ ಬಂಗಾರದ ಶಿವನ ವಿಗ್ರಹವನ್ನು ತಿರವೇರರ್ ಕಾಡು ದೇವಾಲಯಕ್ಕೆ ದಾನಮಾಡಿದ ವಿಚಾರ ಚರಿತ್ರೆಯಿಂದ ತಿಳಿಯುತ್ತದೆ. ಕಂಚಿನ ಪ್ರತಿಮೆಗಳ ವಿನ್ಯಾಸ, ಶೈಲಿ, ಮುಖಲಕ್ಷಣ ತನ್ನದೇ ಆದ ಚಾಪನ್ನು ಹೊಂದಿದ್ದು ಚೋಳ ಶೈಲಿಯಂದೇ ಖ್ಯಾತಿ ಪಡೆದಿದೆ. ಕ್ರಿ.ಶ.೮೭೦ ರಿಂದ ೯೦೭ರ ಕಾಲದಲ್ಲಿ ಆದಿತ್ಯ ಚೋಳನ ಕಾಲದಲ್ಲಿ ಚಿದಂಬರನಲ್ಲಿ ಅತ್ಯದ್ಭುತವಾದ ನಟರಾಜ ಮಂದಿರವಾಯಿತು. ನಂತರ ಆದಿತ್ಯ ಚೋಳನ ಮಗ ಒಂದನೇ ಪರಾಂತಕನ ಕಾಲದಲ್ಲಿ ಆ ಮಂದಿರಕ್ಕೆ ಬಂಗಾರದ ಮೇಲ್ಛಾವಣಿ ಹೊದಿಸಿದಂತಹ ವಿಷಯ ತಿಳಿಯುತ್ತದೆ. ರಾಜರಾಜ ಚೋಳನ ಕಾಲದಲ್ಲಿ ವಿಶ್ವವಿಖ್ಯಾತ ಲೋಹದ ಪ್ರತಿಮೆ ನಿರ್ಮಾಣವಾದುದಕ್ಕೆ ಆದಾರ ದೊರಕುತ್ತವೆ. ಚೋಳರು ಗಂಗೈಕೊಂಡಪುರಂನ್ನು ತಮ್ಮ ಹೊಸ ರಾಜದಾನಿಯನ್ನಾಗಿ ಮಾಡಿಕೊಂಡು ನಂತರದಲ್ಲಿ

ಇದೊಂದು ಪ್ರಸಿದ್ದ ಲೋಹ ಕೇಂದ್ರವಾಗಿ ರಾಜ್ಯದಲ್ಲೆಡೆಯಲ್ಲೆಲ್ಲಾ ಆಕರ್ಶಿಸುವಂತಾಯಿತು. ತಂಜಾವೂರು ಕಡೆಯಿಂದಲೂ ಸಹ ಶಿಲ್ಪಿಗಳು ಬಂದು ಲೋಹ ಪ್ರತಿಮೆಗಳಿಗೆ ಹೊಸ ಚಾಲನೆ ದೊರೆಯಿತು.

**ಧಾರ್ಮಿಕಶಿಲ್ಪ :** ಧರ್ಮದ ಮೂಲಕ ಲೋಹಶಿಲ್ಪಕ್ಕೆ ಒಳ್ಳೆ ಚಾಲನೆ ದೊರಕಿದ್ದು, ಜೈನರ ಕಾಲದಲ್ಲಿ ಕ್ರಿ.ಶ.೯೭೦ರ, ದೆಂದು ಊಹಿಸಬಹುದಾದ ಬಾಹುಬಲಿ ಮೂರ್ತಿಯ ಕಂಚಿನ ಶಿಲ್ಪ ಶಾಸನ ಸಹಿತವಾಗಿರುವುದು ಸಿಕ್ಕಿದೆ. ಇದು ೬೧ ಸೆಂಟಿಮೀಟರ್ ಎತ್ತರವಿದೆ. ಶ್ರವಣ ಬೆಳಗೊಳದ ವೃಷಭನಾಥ ಆದಿನಾಥ ವಿಗ್ರಹಗಳು ಮೂಡಬಿದ್ರಿಯ ಗುರುಬಸದಿಯಲ್ಲಿರುವ ಕಂಚಿನ ಶಿಲ್ಪಗಳು ಜೈನರ ಕೊಡುಗೆಯಾಗಿದೆ. (ಶಿಲ್ಪಕಲಾ ಪ್ರಪಂಚ ೪೩೬)

ಬೌದ್ಧ ಧರ್ಮವು ಕಡಿಮೆ ಏನಿಲ್ಲ. ಬುದ್ಧನ ಪ್ರತಿಮೆಗಳು ಬಹುತೇಕ ಲೋಹಮೂರ್ತಿಗಳಾಗಿವೆ. ಇತ್ತೀಚೆಗೆ ಅಂದರೇ ೧೫ನೇ ಶತಮಾನದ ಈಚೆಗೆ ನಿರ್ಮಾಣ ಗೊಂಡಿರುವ ಬುದ್ಧನ ಆಲಯಗಳು ಕಂಚಿನ ಮತ್ತು ಬಂಗಾರದ ಹೊದಿಕೆಯುಳ್ಳ ತಳ ತಳನೆ ಹೊಳೆಯುವ ಲೋಹ ವಿಗ್ರಹಗಳೇ ಆಗಿವೆ. ಬುದ್ಧ ಗಯಾದಲ್ಲಿ ಚೈನಾದವರು, ಟಿಬೆಟಿಯನ್ನರು, ಜಪಾನಿನವರು ಕಟ್ಟಿಸಿರುವ ದೇವಾಲಯಗಳಲ್ಲಿ ಲೋಹದ ಹೊದಿಕೆಯ ಬುದ್ಧನ ವಿಗ್ರಹಗಳನ್ನು ಇಂದಿಗೂ ಕಾಣಬಹುದು.

**ಹೋಯ್ಸಳ ಪ್ರಭಾವ :** ಮೈಸೂರು ಮತ್ತು ಸುತ್ತಮುತ್ತಲಿನ ಶಿಲ್ಪಿಗಳು ಹೆಚ್ಚಿನ ಪ್ರಮಾಣದಲ್ಲಿ ವಿಜಯನಗರದ ಕಡೆಯಿಂದ ಬಂದವರೆಂದು ತಿಳಿದು ಬರುತ್ತದೆ. ಅವರು ಮಾಡುವ ಕಲಾ ಶೈಲಿ ಮಾತ್ರ ಬಹುತೇಕ ಹೋಯ್ಸಳ ಶೈಲಿಯನ್ನೇ ಅನುಸರಿಸುತ್ತವೆ. ಅದಕ್ಕೆ ಕಾರಣವು ಇಲ್ಲದಿಲ್ಲ. ಎಂತಹ ಮುಗ್ಧರನ್ನು ಅರಸಿಕರನ್ನು ರಸಿಕರನ್ನು ಆಕರ್ಶಿಸುವುದೇ ಹೊಯ್ಸಳ ಶೈಲಿಯ ಕಲೆ. ಅದೂ ಅಲ್ಲದೇ ಮೈಸೂರಿಗೆ ಹತ್ತಿರವಾಗಿ ಹಾಸನ ಜಿಲ್ಲೆಯಲ್ಲಿದೆಯಾದ್ದರಿಂದ ಆ ದೇವಾಲಯಗಳು ಸಹಜವಾಗಿಯೇ ಎಲ್ಲರನ್ನು ಆಕರ್ಶಿಸುತ್ತವೆ. ಯಾವುದೇ ವಿಗ್ರಹ ಮಾಡಿಸುವವರಾದರೂ ಅಂತಹ ಕುಶರಿ ಕೆಲಸವನ್ನು ಬಯಸುತ್ತಾರೆ. ಹಾಗಾಗಿ ಗ್ರಾಹಕನನ್ನು ತೃಪ್ತಿಪಡಿಸುವುದು ಶಿಲ್ಪಿಯ ಕರ್ತವ್ಯವಾದ್ದರಿಂದ ಅವರುಗಳ ರಚನಾ ಶೈಲಿಯು ಸಹಜವಾಗಿಯೇ ಹೊಯ್ಸಳ ಶೈಲಿಯ ಕಡೆಗೆ ವಾಲಿದೆ ಎಂಬುದಕ್ಕೆ ಮೈಸೂರಿನ ಪ್ರಸಿದ್ಧ ಶಿಲ್ಪಿ ಸಿದ್ದಾಂತಿ ಸಿದ್ದಲಿಂಗಸ್ವಾಮಿಗಳ ಶಿಲ್ಪರಚನೆಗಳೆಲ್ಲವೂ ಹೊಯ್ಸಳ ಶೈಲಿಯಲ್ಲಿಯೇ ಇದೆ. ಅವರಿಂದ ಕಲಿತ ನೂರಾರು ಶಿಷ್ಯರು ಸಹ ಅದೇ

ಲಿಯನ್ನೇ ಅನುಸರಿಸಿ ಇಂದು ಪ್ರಖ್ಯಾತರಾಗಿದ್ದಾರೆ. ಹಲವಾರು ಪ್ರಶಸ್ತಿ ಪುರಸ್ಕಾರ ಡೆದಿದ್ದಾರೆ ಅಂತವರಲ್ಲಿ ಶಿಲಾಶಿಲ್ಪಿ ಪರಮೇಶ್ವರಾಚಾರ್, ನಾಗೇಂದ್ರಸ್ತಪತಿ, ಸ್.ನಂಜುಂಡಸ್ವಾಮಿ, ಪುಟ್ಟಣ್ಣಯ್ಯಚಾರ್, ಮಾಯಾಚಾರ್, ನೀಲಕಂಠಾಚಾರ್ ಮುಂತಾದವರು ಮುಖ್ಯರೆನಿಸುತ್ತಾರೆ.

**ಶಾಸ್ತ್ರ ಮತ್ತು ಶಿಲ್ಪ :** ಶಾಸ್ತ್ರೋಕ್ತವಾದ ಶಿಲ್ಪ ಮಾಡಿಸಬೇಕು, ಶಾಸ್ತ್ರೋಕ್ತವಾಗಿ ಪ್ರತಿಷ್ಠಾಪಿಸಬೇಕೆಂದು ಎಲ್ಲೆಲ್ಲೂ ಹೇಳುವುದನ್ನು ಕೇಳುತ್ತೇವೆ. ಶಾಸ್ತ್ರದಲ್ಲಿ ಹೇಳಿರುವಂತೆ ಉಕ್ತ) ಮಾಡುವವರು ಯಾರಿದ್ದಾರೆಂದು ಊರಿಂದೂರಿಗೆ ಹುಡುಕಿಕೊಂಡು ಹೋಗುತ್ತಾರೆ. ಎಷ್ಟೇ ದೂರವಿರಲಿ, ಮಾಡುವಾತ ಎಷ್ಟೇ ಹಣ ಕೇಳಲಿ, ಆತನಿಂದಲೇ ಮಾಡಿಸುವ ಪ್ರಯತ್ನ ಮಾಡುತ್ತಾರೆ. ಇದಕ್ಕೆಲ್ಲಾ ಕಾರಣ ಶಾಸ್ತ್ರೋಕ್ತ ಎಂಬುದೇ ಆಗಿರುತ್ತದೆ. ಶಾಸ್ತ್ರ ಹೇಳಿರುವುದಾದರೂ ಏನು?

ದೇವಾಲಯ ನಿರ್ಮಾಣ(ವಾಸ್ತು) ಪ್ರತಿಮೆಗಳ ರಚನೆ, ಸ್ಥಾಪನೆಗಳ ಬಗ್ಗೆ ವಿವರಗಳು. ಪ್ರತಿಯೊಂದು ದೇವತಾ ಮೂರ್ತಿಗಳ ರೂಪ, ರಚನೆ, ಅಂಗಾಂಗಗಳು, ಆಯುಧ, ವಸ್ತ್ರಾಭರಣ, ಮುಖಲಕ್ಷಣಗಳನ್ನು ಕುರಿತು ಧ್ಯಾನಶ್ಲೋಕಗಳಿವೆ. ಬೃಹತ್ಸಂಹಿತೆ, ಮಾನಸಾರ, ಮಯಮತ, ವಿಷ್ಣುಧರ್ಮೊತ್ತರ, ಕಾಶ್ಯಪ ಶಿಲ್ಪ ಶಾಸ್ತ್ರ, ಶಿಲ್ಪರತ್ನ, ಮಾನಸೋಲ್ಲಾಸ ಮುಂತಾದ ಗ್ರಂಥಗಳಲ್ಲಿ ಅಚಲ ಮತ್ತು ಚಲ ಮೂರ್ತಿಗಳ ವಿವರವಾದ ಮಾಹಿತಿ ದೊರಕುತ್ತದೆ. ಅವುಗಳ ನಿರ್ಮಾಣ ಕಾಲದಲ್ಲಿ ಅನುಸರಿಸ ಬೇಕಾದ ತಾಳಮಾನ, ಸ್ತ್ರೀ ಪುರುಷ ದೇವತೆಗಳ ವ್ಯತ್ಯಯ. ಶ್ಯಾನ್ತಃ ಮೂರ್ತಿಯೇ, ಉಗ್ರಮೂರ್ತಿಯೇ ಎಂದು ತಿಳಿದು ಅನುಸರಿಸ ಬೇಕಾದ ಕ್ರಮಗಳು, ಯಾವದಿಕ್ಕಿಗೆ ಯಾವ ಮೂರ್ತಿ ಇಡಬೇಕು. ಊರ ಒಳಗಿನ ಮೂರ್ತಿ ಯಾವುದು. ಊರ ಹೊರಗೆ ಸ್ಥಾಪಿಸಬೇಕಾದ ಮೂರ್ತಿ ಯಾವುದು ಇತ್ಯಾದೀ ಮಾಹಿತಿ ತಿಳಿಸುವ ಕುರಿತ ಶಿಲ್ಪಿಗಳನ್ನು ಹುಡುಕಿಕೊಂಡು ಹೋಗುವುದನ್ನು ಕಾಣುತ್ತೇವೆ.

ಈ ರೀತಿ ಶಾಸ್ತ್ರೋಕ್ತವಾದ ಶಿಲ್ಪ ಮಾಡುವವರು ಕರ್ನಾಟಕದಲ್ಲಿ ಕೆಲವೇ ಕುಟುಂಬಗಳಿವೆ, ಸ್ಥಳಗಳಿವೆ. ಅದರಲ್ಲಿ ಶಿಲಾಕೆತ್ತನೆಗೆ ಕೋಲಾರಜಿಲ್ಲೆಯ ಶಿವಾರಪಟ್ಟಣ, ಮೈಸೂರಿನ ಶಿಲ್ಪಿ ಸಿದ್ದಾಂತಿ ಸಿದ್ದಲಿಂಗ ಸ್ವಾಮಿಗಳ ಗುರುಕುಲ ಮತ್ತು ಮಂಡ್ಯ ಜಿಲ್ಲೆಯ ನಾಗಮಂಗಲ, ಲೋಹಶಿಲ್ಪ ರಚನೆಗೆ ಪ್ರಸಿದ್ದಿಯಾಗಿದ್ದ ಸ್ಥಳಗಳಾಗಿದ್ದವು.

ನಾಗಮಂಗಲದ ನೀಲಕಂಠಾಚಾರ್ ಪ್ರಸ್ತುತ ನಮ್ಮೊಡನೆ ಇರುವ ಪ್ರಸಿದ್ಧಶಿಲ್ಪಿ. ಇವರಿಗೆ ಶಿಲ್ಪ ಕೆಲಸ ಮನೆತನದಿಂದ ಬಂದದ್ದು, ಇವರ ತಂದೆ ಗಣೇಶಾಚಾರ್,

ತಾತ ಕಸ್ತೂರಾಚಾರ್ ಮತ್ತು ಸಂಬಂದಿಕರೆಲ್ಲರೂ ಶಿಲ್ಪ ರಚನೆಯ ಮೂಲಕವೇ ಬದುಕನ್ನು ಸಾಗಿಸುತ್ತಿದ್ದವರು. ಇವರೆಲ್ಲರಿಗೂ ಪುಸ್ತಕದ ಓದಿಗಿಂತ ಮಸ್ತಕದ ಓದು, ದೈಹಿಕ ದುಡಿಮೆ ಮುಖ್ಯವೆಂದೆನಿಸುತ್ತಿತ್ತು.

**ನಾಗಮಂಗಲದ ಖ್ಯಾತಿ ನಾಲ್ದೆಸೆಗೆ :** ಸುಮಾರು ೪೦-೫೦ ವಿಶ್ವಕರ್ಮ ಕುಟುಂಬಗಳಿದ್ದ ಪುಟ್ಟಹಳ್ಳಿ. ಎಲ್ಲಿ ನೋಡಿದರೂ ಒಬ್ಬೊಬ್ಬರದು ಒಂದೊಂದು ಬಗೆಯ ಶಿಲ್ಪ ನಿರ್ಮಾಣ. ಕಲ್ಗೆತ್ತನೆ, ಮರಗೆತ್ತನೆ, ಎರಕದ ಕೆಲಸ. ನಕಾಶೆಕೆಲಸ ಅಷ್ಟೇ ಅಲ್ಲ ನಿತ್ಯಬದುಕಿಗೆ ಅವಶ್ಯಕವಾದ ರೈತನ ಸಾಗಾಣಿಕೆಯ ಸಹಕಾರವಾದ ಎತ್ತಿನ ಬಂಡಿ. ಅವುಗಳ ಚಕ್ರನಿರ್ಮಾಣ, ಮತ್ತು ನಿತ್ಯ ಬಳಕೆಯ ಗುದ್ದಲಿ ಪಿಕಾಸಿ, ಹಾರೆ, ಮುಂತಾದ ಉಪಕರಣಗಳನ್ನು ತಯಾರು ಮಾಡುವ ಹದಗೊಳಿಸುವ ಕೈಕಸುಬುಳ್ಳ ಕೇಂದ್ರ ನಾಗಮಂಗಲ.

ಆದರೇ ಇವೆಲ್ಲಕಿಂತಲೂ ಮಿಗಿಲಾಗಿ ನಾಗಮಂಗಲದ ಖ್ಯಾತಿ ಲೋಹಶಿಲ್ಪಗಳನ್ನು ಕುರಿತದ್ದು. ಅರಗು ಕಟ್ಟುವ, ಎರಕಹುಯ್ಯುವ ವಿದ್ಯೆ ಮಾತ್ರ ಕೆಲವೇ ಕುಟುಂಬಕ್ಕೆ ಸೀಮಿತವಾಗಿತ್ತು. ಅದೊಂದು ರಸವಿದ್ಯೆ. ಸೂಕ್ಷ್ಮ ಸಂವೇದನೆಯ ಸರ್ವೋತ್ಕೃಷ್ಟ ಕಲೆ ಅದು.

ಅಲ್ಲಿನ ಮನೆಗಳ ಸಾಲ ಬದಿಯಲ್ಲಿ ಹಾಯ್ದು ಹೋಗುವವರಿಗೆ ತಟ್ಟುವ ಕುಟ್ಟುವ ಸುತ್ತಿಗೆಯ ಚಾಣದ ನಾದ ಮಾದುರ್ಯದ ಇಂಪು. ವಾದ್ಯ ನುಡಿಸುವವನ ಪಕ್ಕದಲ್ಲಿದ್ದವನಿಗೆ ಆ ನಾದದ ಇಂಪನ್ನು ಕೇಳುವ ಸೌಭಾಗ್ಯವಿರುವಂತೆ, ರಸ್ತೆ ಬದಿಯಲ್ಲಿ, ಮನೆಯ ಹೊರ ಆವರಣದಲ್ಲಿ ಮಾಡುವ ಕೆಲಸದ ರಿಂಗಣ, ದಾರಿಹೋಕರ ಕರ್ಣ ಬೇದಿಸುವುದರ ಜೊತೆಗೆ ಏನುಮಾಡುತ್ತಿದ್ದಾರೆಂಬ ಕುತೂಹಲ ಕೆರಳಿಸಲು ನೆರವಾಗುತ್ತಿತ್ತು. ಮೇಣದ ಮೂರ್ತಿ, ಅರ್ಧಂಬರ್ಧವಾದ ಮೂರ್ತಿಗಳು. ತಗಡಿನ ರೇಖುಗಳು, ವಿವಿದ ಆಯುಧಗಳ ತುಣಕುಗಳು, ಕುಲುಮೆ, ಅರಗಿನ ಪೂರ್ಣಗೊಂಡ, ಪೂರ್ಣಗೊಂಡಿಲ್ಲದ ನಾನಾಬಗೆಯ ಮೂರ್ತಿ ಶಿಲ್ಪಗಳು ಕ್ಷಣಕಾಲವಾದರು ನಿಂತು ನೋಡುವಂತೆ ಮಾಡುತ್ತಿದ್ದವು. ನಾವು ಯಾವುದೇ ಪತ್ರಿಕೆ ಪ್ರಚಾರಕ್ಕೆ ಹೋಗಬೇಕಾಗಿರಲಿಲ್ಲ. ಅಲ್ಲಿನ ಕೆಲಸ ನೋಡೀ ತನ್ನಿಂದ ತಾನೇ ಪ್ರಚಾರ ಗೊಳ್ಳುತ್ತಿತ್ತು ಎಂದು ತಮ್ಮ ಹಿಂದಿನ ನೆನೆಪನ್ನು ನೀಲಕಂಠಾಚಾರ್ಯರು ಮೆಲಕು ಹಾಕುತ್ತಾರೆ.

ನಾಗಮಂಗಲದಿಂದ ಬಂದ ಲೋಹ ಶಿಲ್ಪಿಗಳ ಖ್ಯಾತಿ ಎಲ್ಲೆಡೆ ಹಬ್ಬಿತ್ತು. ಕಸ್ತೂರಾಚಾರ್ಯರು ಮಾಡಿದ ಶಿಲ್ಪ ಲಂಡನನಲ್ಲಿ ನಡೆದ ವಿಶ್ವಕಲಾ ಪ್ರದರ್ಶನದಲ್ಲಿ

ದರ್ಶನಗೊಂಡು ವಿಕ್ಟೋರಿಯಾ ರಾಣಿಯವರ ಸ್ವರ್ಣ ಪದಕಗಳಿಸಿತ್ತು (೧೮೮೬).
ೖಸೂರಿನ ಮಹಾರಾಜರಾದ ನಾಲ್ವಡಿ ಕೃಷ್ಣರಾಜಒಡೆಯರ್ ಅವರು ಅಲ್ಲಿನ ಮತ್ತೊಬ್ಬ
ಲ್ಪಿ ವೆಂಕಟಾಚಾರ್ಯರು ಮಾಡಿಕೊಟ್ಟ ಕರಂಡವನ್ನು ನೋಡಿ ಸಂತೋಷದಿಂದ
ತ್ಕರಿಸಿದರು. ಅವರ ಪುತ್ರ ಚೆನ್ನಾಚಾರ್ಯರು ಅಪ್ರತಿಮ ಲೋಹಶಿಲ್ಪಿಯಾಗಿ,
ುಂಬಾಯಿ, ಹೈದ್ರಾಬಾದ್, ಅಜಂತಾ ಎಲ್ಲೋರ ಎಲ್ಲಾಕಡೆ ಸುತ್ತಾಡಿ ಬಂದು
ಲೆಯ ವಿವಿದ ತಂತ್ರಗಳನ್ನು ಮೈಗೂಡಿಸಿಕೊಂಡಿದ್ದವರು. ಏಳನೇ ಎಡ್ವರ್ಡ ಚಕ್ರವರ್ತಿಗೆ
ನ್ನಾಚಾರ್ಯರು ಮಾಡಿ ಕೊಟ್ಟ ಶಿಲ್ಪ ಪ್ರಶಂಸೆಗಳಿಸಿತ್ತು. (ಶಿಲ್ಪಸಂಕುಲ ಪುಟ-೪೫)
ಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಲೋಹವಿಭಾಗದಲ್ಲಿ ೧೮ವರ್ಷ
ಕ್ಷಕರಾಗಿದ್ದರು. ನಾಗಮಂಗಲದಿಂದಲೇ ಬಂದಲೋಹ ಶಿಲ್ಪಿಗಳಾದ ಶಾಮಾಚಾರ್ಯ,
ುರ್ಯ ನಾರಾಯಣಚಾರ್ಯ, ಗುಂಡಾಚಾರ, ವಿಶ್ವರೂಪಾಚಾರ್ ಹೀಗೇ ಅನೇಕರು
ಲ್ಪಿಗಳಾಗಿ, ಶಿಕ್ಷಕರಾಗಿ ಹಲವು ಮುಖಗಳಲ್ಲಿ ನಾಗಮಂಗಲದ ಖ್ಯಾತಿಯನ್ನು ನಾಲ್ದೆಸೆಗೆ
ಸರಿಸಿದ್ದಾರೆ.

**ಪರಂಪರೆ** : ನೀಲಕಂಠಾಚಾರ್ಯರ ಹಿಂದಿನ ತಲೆಮಾರು ಮಾಡಿದ ಶಿಲ್ಪಗಳ
ವರ ಬರೆಯುತ್ತಾ ಹೋದರೇ ಒಂದು ಹೆಬ್ಬೊತ್ತಿಗೆಯನ್ನೇ ಬರೆಯಬೇಕಾದೀತು.
ವರು ಬೆಳೆದ ಹಿನ್ನಲೆ ಮಾತ್ರ ನಮಗೆ ಮುಖ್ಯವೆನಿಸುತ್ತವೆ. ಇವರ ತಾತ ಕಸ್ತೂರಾ
ಚಾರ್ ಶಿಲಾಕೆತ್ತನೆ, ಮರಗೆತ್ತನೆ ಮತ್ತು ಲೋಹಶಿಲ್ಪ ರಚನೆಯಲ್ಲಿ ಸಿದ್ದಹಸ್ತರು.
ತ್ಯಂತ ಧರ್ಮನಿಷ್ಟರು. ಸಂಸ್ಕೃತ ಅಧ್ಯಯನ ಮಾಡಿದವರಾಗಿದ್ದವರು. ಅದಕ್ಕಾಗಿಯೇ
ಶ್ವಕರ್ಮ ಜನಾಂಗದ ಮುಖ್ಯಸ್ಥರನ್ನಾಗಿ ಮಾಡಿದ್ದರು. ಜನಾಂಗದ ಯಾವುದೇ
ಾರ್ಯ ಮಾಡಿದರೂ ಅವರನ್ನು ಕೇಳಿ ನಂತರ ಮುಂದುವರೆಯುವ ಪರಿಪಾಠ
ಳೆದಿತ್ತು. ಅವರ ಕಾಲಾನಂತರದಲ್ಲಿ ಯಜಮಾನಿಕೆಯ ಸ್ಥಾನ ಪಡೆದವರು
ೀಲಕಂಠಾಚಾರ್ಯರ ದೊಡ್ಡಪ್ಪನವರಾದ ಶ್ರೀಕಂಠಾಚಾರ್ಯರು. ಇವರು ಸಹ
ಲೋಹಕಲೆ, ಕಾಷ್ಟಗಳಲ್ಲಿ ಶಿಲ್ಪ ಕಲಾ ನಿಪುಣರು. ಎಂತಹ ಕಠಿಣ ಕೆಲಸ ಬಂದರೂ
ುದೆಗುಂದದೇ ಸರಾಗವಾಗಿ ಸರಳವಾಗಿ ಮಾಡಬಲ್ಲ ಚತುರತೆ ಪಡೆದಿದ್ದರು. ನಕಾಶೆ
ೆಲಸದಲ್ಲಿ ಅವರದು ಸಿದ್ದಹಸ್ತ. ನವಿರು ನವಿರಾದ ಸೂಕ್ಷ್ಮ ಎಳೆ ಎಳೆಯ ಕೆತ್ತನೆಗಳಿಗೆ
ರಿದಾದ ಲೋಹತಗಡಿನಲ್ಲಿ ಬ್ರಹ್ಮಾಂಡವನ್ನು ತೋರಿಸಬಲ್ಲ ನಯಗಾರಿಕೆಯ ಕೆಲಸಗಳಿಗೆ
ಪ್ರಸಿದ್ದಿ. ಹಾಗೆಯೇ ಜನಾಂಗದ ಸಮಸ್ಯೆಗಳಿಗೆ ಸ್ಪಂದಿಸುವ, ಮತ್ತವರ ಕೆಲಸ
ಾರ್ಯಗಳಿಗೆ, ದುಃಖ ದುಮ್ಮಾನಗಳಿಗೆ ಹೆಗಲುಕೊಡುವ ವಿಶಾಲಗುಣ ಅವರದು.

ಇಂತವರಲ್ಲಿ ಶಿಷ್ಯವೃತ್ತಿ ಮಾಡಿದ ನೀಲಕಂಠಾಚಾರ್ಯರಿಗೆ ಸಹಜವಾಗಿಯೇ ಅವರ ಸದ್ಗುಣಗಳು, ಕಲಾ ಚಾತುರ್ಯಗಳು ಮೈಗೂಡಿಕೊಂಡು ಬಂದವು.

**ವಿದ್ಯಾಭ್ಯಾಸ :** ತಂದೆ ಗಣೇಶಾಚಾರ್ಯರಿಗೆ ತಮ್ಮ ಮಗ ಉತ್ತಮ ಮಟ್ಟದಲ್ಲಿ ಓದಬೇಕೆಂಬ ತವಕವೇನೋ ಇತ್ತು. ಆದರೇ ಆದದ್ದೇ ಬೇರೆ. ತಾಯಿ ಕಾಮಕ್ಷಮ್ಮ ತೀರಿಹೋದರು. ಆಗ ತಬ್ಬಲಿಯಾದ ನೀಲಕಂಠಾಚಾರ್ಯರಿಗೆ ಐದುವರ್ಷ ಮಾತ್ರ. ಅಜ್ಜ ಅಜ್ಜಿಯರ ಆಶ್ರಯದಲ್ಲಿ ಬೆಳೆದರು.

ಇಡೀ ಜೀವನವೇ ಕತ್ತಲಲ್ಲಿ ಮುಳಗಿದಂತಾಗಿ ಬಾಲಕ ಪರಿತಪಿಸುವಂತಾದಾಗ ದೊಡ್ಡಪ್ಪ ಶ್ರೀಕಂಠಾಚಾರ್ಯರು ಕಲಾ ವಿದ್ಯೆಯ ಓಂ ನಾಮ ಹಾಕಿದರು. ಅಂದಿನ ಅವರ ಬುನಾದಿಯೇ ಇಂದಿಗೆ ನನ್ನನ್ನು ಈ ಮಟ್ಟಕ್ಕೆ ತಂದುನಿಲ್ಲಿಸಿದೆಯೆಂದು ಹೇಳಲು ಮರೆಯುವುದಿಲ್ಲ. ಮೈಮನಗಳೆಲ್ಲವೂ ಕಲೆಯತ್ತ ವಾಲಿದುದರಿಂದ ಮೈಸೂರಿನ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಗೆ ೧೯೪೨ರಲ್ಲಿ ಸೇರಿಸಿದರು. ಅಲ್ಲಿ ಸೋದರಮಾವ ಸೂರ್ಯನಾರಾಯಣಚಾರ್ ಲೋಹ ಶಿಲ್ಪ ವಿಭಾಗದ ಮುಖ್ಯಸ್ಥರಾಗಿದ್ದರು. ಬಾಲಕ ನೀಲಕಂಠುವಿಗೆ ಸಹಜವಾಗಿ ಲೋಹ ಶಿಲ್ಪದ ಬಗ್ಗೆ ಒಲವುಂಟಾಯಿತು. ೫ ವರ್ಷಗಳ ಪೂರ್ಣ ಶಿಕ್ಷಣ ಪಡೆದರು. ಆ ಸಂದರ್ಭದಲ್ಲಿ ಸೂರ್ಯ ನಾರಾಯಣಾಚಾರ್ ಅವರು ಮನೆಯಲ್ಲಿಯೇ ಬಾಲಕ ನೀಲಕಂಠಾಚಾರರನ್ನು ಇಟ್ಟುಕೊಂಡು ಊಟವಸತಿಗೆ ಅವಕಾಶ ಮಾಡಿ ಕೊಟ್ಟರು. ಹೀಗೆ ಸೂರ್ಯ ನಾರಾಯಣಚಾರ್ ಒಂದೆಡೆ ಗುರುವಾಗಿ ಮತ್ತೊಂದೆಡೆಯಲ್ಲಿ ಪೋಷಕರಾಗಿ ಸರ್ವಾಂಗೀಣ ಬೆಳವಣಿಗೆಗೆ ಕಾರಣರಾದರು ಎಂಬುದನ್ನು ಸ್ಮರಿಸುತ್ತಾರೆ. ಅದೇ ಸಂದರ್ಭದಲ್ಲಿಯೇ ವಿದ್ಯಾರ್ಥಿ ಪೋಷಕಧನ (Stipend) ದೊರತದ್ದರಿಂದ ಶಿಕ್ಷಣ ಸಲಕರಣೆ ಪಡೆಯಲು ಸಹಕಾರಿಯಾಯಿತೆಂದು ನೆನಪಿಸಿಕೊಳ್ಳುತ್ತಾರೆ.

**ವಿಶೇಷಾನುಭವ :** ಈ ಐದು ವರ್ಷಗಳ ಶಿಕ್ಷಣ ನನ್ನ ಜೀವನದ ಮೈಲಿಗಲ್ಲು ಎಂದು ನೆನಪಿಸಿಕೊಳ್ಳುವ ಇವರು. ಬಿಡುವಿನ ಸಂದರ್ಭದಲ್ಲೆಲ್ಲಾ ಶ್ರೀ ಸಿದ್ದಲಿಂಗ ಸ್ವಾಮಿಗಳವರ ಗುರುಕುಲಾಶ್ರಮಕ್ಕೆ ಹೋಗುತ್ತಿದ್ದೆ. ಅಲ್ಲಿ ನನ್ನ ತಮ್ಮ ವಿಷಕಂಠಚಾರ್ ಸ್ವಾಮಿಗಳ ಶಿಷ್ಯರಾಗಿ ಕೆಲಸ ಮಾಡುತ್ತಿದ್ದರು. ಸ್ವಾಮಿಗಳಾದರೋ ಯಾರೇ ಬರಲಿ, ಅದರಲ್ಲೂ ಕಲಿಯುವ ಹಂಬಲವಿರುವವರಿಗೆ ಮುಕ್ತರೀತಿಯಿಂದ ಬೋಧನೆ ಮಾಡುತ್ತಿದ್ದರು. ಹಿರಿಯ, ಕಿರಿಯ ಎಂಬ ಭೇದವನ್ನೆಣಸದೇ ಬಂದವರನ್ನು ಸ್ವಾಗತಿಸಿ ಗೌರವಿಸುತ್ತಿದ್ದರು. ಮತ್ತು ಅಲ್ಲಿ ಹಲವಾರು ಜನ ಕೆಲಸ ಮಾಡುತ್ತಿದ್ದರು. ಅದೇ

ಂದರ್ಭದಲ್ಲಿಯೇ ಶ್ರೀ ಕಾಮ ಕಾಮೇಶ್ವರಿ ದೇವಾಲಯದ ನಿರ್ಮಾಣ ಕಾರ್ಯ
ರದಿಂದ ನಡೆಯುತ್ತಿತ್ತು. ನೂರಾರು ಹೊಯ್ಸಳ ಶೈಲಿಯ ವಿಗ್ರಹಗಳು
ಪಗೊಳ್ಳುತ್ತಿದ್ದವು. ಇವೆಲ್ಲವೂ ಯುವಶಿಲ್ಪಿ ನೀಲಕಂಠಾಚಾರ್ಯರಿಗೆ ಕಲೆಯ ವಿವಿದ
ರ್ಮಗಳನ್ನು ತಿಳಿಯಲು ಸಹಕಾರಿಯಾದವು.

**ಹಿರಿಯ ಶಿಲ್ಪಿಗಳೊಡನೆ :** ಮತ್ತೊಂದು ಕಡೆಯಲ್ಲಿ ಸ್ವರ್ಣಶಿಲ್ಪಿ ಸಿಂಗಣ್ಣಾ
ರ್ಯರ ಮೂಲಕ ಅರಮನೆಗೆ ಬೇಕಾದ ಚಿನ್ನಾಭರಣದ ಕೆಲಸಗಳು ನಡೆಯುತ್ತಿದ್ದವು.
ಂಗಣ್ಣಾಚಾರ್ಯರ ಮನೆ ಎಂದರೇ ಚಿನ್ನ ತುಂಬಿದ ಕಣ ಕಣಗಳಿಂದ ತುಂಬಿದ್ದು.
ರುಸಾವಿರ ತೊಲೆಯ ಬಂಗಾರದಿಂದ ಮಹಾರಾಜರು ಕೂರಬಹುದಾದ
ಂಬಾರಿಯನ್ನು ಮಾಡಿದವರು. ಈಗ ನಾವು ದಸರಾ ವೇಳೆಯಲ್ಲಿ ಚಾಮುಂಡೇಶ್ವರಿ
ರವಣಿಗೆ ಮಾಡುವ ಅಂಬಾರಿಯನ್ನು ಏನು ಕಾಣುತ್ತೇವೆ. ಅದು ಅವರ ಅಪೂರ್ವ
ಲಾಕೊಡುಗೆ. ಈ ಅಂಭಾರಿ ಮೂರು ಕಂಬಗಳುಳ್ಳ ಏಕಕಂಬವಾಗಿದ್ದು ಅಂತಹ
ಾಲ್ಕು ಕಂಬಗಳು ವಿವಿದ ಚಿತ್ತಾರಗಳಿಂದ ಪರಿಶೋಬಿಸುತ್ತವೆ. ಮೇಲ್ಮಾಡು
ೋಪುರಾಕೃತಿಯಲ್ಲಿದ್ದು ಪಂಚಕಳಸದಿಂದ ಕೂಡಿದೆ. ಪೂರ್ಣ ಚಿನ್ನದ ತಗಡಿನ
ೊದಿಕೆಯ ಈ ಅಂಬಾರಿ ನಿರ್ಮಿಸಲು ವರ್ಷಗಟ್ಟಲೇ ತಗಲಿದುದೇ ಅಲ್ಲದೇ
ಲವಾರು ಶಿಲ್ಪಿಗಳು ಸಿಂಗಣ್ಣಾಚಾರ್ಯರ ನೇತೃತ್ವದಲ್ಲಿ ಕೆಲಸ ಮಾಡುತ್ತಿದ್ದರು.
ದಲ್ಲದೇ ಬೆಳ್ಳಿ ಸಾರೋಟು, ಕುದುರೆಗಾಡಿ ಪನ್ನೀರು ದಾನಿ, ಅಂತಃಪುರಕ್ಕೆ ಬೇಕಾದ
ೀರೋಪಕರಣಗಳು, ಶಯನಾಗೃಹಕ್ಕೆ, ದೇವರಕೋಣೆಗೆ ಉಪಯೋಗಿಸುವ ರಜತ
ುತ್ತು ಸ್ವರ್ಣದ ಪದಾರ್ಥಗಳು ಮೇಲಾಗಿ ರಾಣಿಯರು ಮುಡಿಯುವ, ದರಿಸುವ
ಭರಣಗಳು ತಯಾರಾಗುತ್ತಿದುದೇ ಸಿಂಗಣ್ಣಾಚಾರ್ಯರಂತಹ ಶಿಲ್ಪಿಗಳ ಮೂಲಕ.
ದಕ್ಕಾಗಿಯೇ ಅವರನ್ನು ಸ್ವರ್ಣಶಿಲ್ಪಿ ಸಿಂಗಣ್ಣಾಚಾರ್ಯರೆಂದು ಕರೆಯುತ್ತಿದ್ದರು. ಅವರ
ುನೆ ಚಾಮರಾಜೇಂದ್ರ ವೃತ್ತಿ ಶಿಕ್ಷಣ ಶಾಲೆಯ ಹಿಂಬದಿಯಲ್ಲೇ ಇತ್ತು. ಅದೊಂದು
ಶ್ವಕರ್ಮರ ಬೀದಿಯೇ ಆಗಿತ್ತು. ನೀಲಕಂಠಾಚಾರ್ಯರಿಗೆ ಮತ್ತು ಕಲಾಶಾಲೆಯ
ಹಪಾಠಿಗಳಾದ ಮೃತ್ಯಂಜಯಾಚಾರ್. ಮರಿಶ್ಯಾಮಾಚಾರ್, ಚೆಲುವಚಾರ್
ವರೆಲ್ಲರಿಗೂ ಸ್ವರ್ಣ ಕೆಲಸ ನೋಡುವ ಅವಕಾಶ ದೊರಕುತ್ತಿತ್ತು. ಅವರೆಲ್ಲೆಲ್ಲಾ
ುತ್ತಮವಾಗಿ ಮಾಡುತ್ತಾರೆಂಬ, ಯಾವುದೇ ಕೆಲಸವನ್ನು ನಿಗಾವಹಿಸಿ ಕಲಿಯುತ್ತಾರೆಂಬ
ಪ್ರಶಂಸೆಗೆ ಪಾತ್ರರಾಗಿದ್ದವರು ನೀಲಕಂಠಾಚಾರ್ಯರು.

ಸಿಂಗಣ್ಣಾಚಾರ್ಯರಿಗೆ ಕೆಲಸದ ಒತ್ತಡ ಜಾಸ್ತಿ ಆದಾಗಲೆಲ್ಲಾ

ನೀಲಕಂಠಾಚಾರ್‌ರನ್ನು ಕಳಿಸಿಕೊಡಲು ಲೋಹಶಿಲ್ಪ ಕಲಾ ವಿಭಾಗದ ಮುಖ್ಯಶಿಕ್ಷಕರಾದ ಸೂರ್ಯನಾರಾಯಣಾಚಾರ್ ಅವರನ್ನು ಕೇಳಿಕೊಳ್ಳುತ್ತಿದ್ದರು. ಇಂತಹ ಸಂದರ್ಭವನ್ನೇ ಕಾಯುತ್ತಿದ್ದ ಇವರಿಗೆ ಶಿಲ್ಪಕಲೆಯ ವಿವಿಧ ಮರ್ಮಗಳನ್ನು ಹಿರಿಯರಿಂದ ತಿಳಿಯಲು ಸಹಕಾರಿಯಾಗುತ್ತಿದ್ದವು.

**ಶಿಕ್ಷಣದ ನಂತರ :** ನೀಲಕಂಠಾಚಾರ್ಯರು ತಮ್ಮ ಕಲಾಶಿಕ್ಷಣ ಪೂರೈಸಿದ ನಂತರ ಮೈಸೂರಿನಲ್ಲಿ ಎರಡು ಮೂರು ವರ್ಷಗಳ ಕಾಲವಿದ್ದು ಹಿರಿಯ ಶಿಲ್ಪಿಗಳ ಮೂಲಕ ಅನುಭವ ಪಡೆದರು. ಇವರ ಸ್ವಂತಿಕೆ ಕಲಾ ಚಾತುರ್ಯಗಳನ್ನು ಮೆಚ್ಚಿಕೊಂಡ ಅರಮನೆ ಅಧಿಕಾರಿಗಳು ಸುಮಾರು ಎರಡಡಿ ಎತ್ತರದ ದೀಪದ ಗೊಂಬೆಯನ್ನು ಮಾಡಲು ತಿಳಿಸಿದರು. ಅತ್ಯಂತ ಅಚ್ಚುಕಟ್ಟಾಗಿ ಕ್ರಮಬದ್ಧವಾಗಿ ಮಾಡಿಕೊಟ್ಟ ದೀಪದಾರಿಣಿ ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು. ಅದೇ ಸಂದರ್ಭದಲ್ಲಿಯೇ ಭರತಪುರದ ಮಹಾರಾಜರಿಗಾಗಿ ಶ್ರೀ ಕೃಷ್ಣನ ವಿಗ್ರಹ ಮಾಡಿಕೊಟ್ಟು ರಾಜ ಮನೆತನದವರ ಗೌರವಾದರಗಳಿಗೆ ಪಾತ್ರರಾದರು. ಅಲ್ಲಿಂದ ಒಂದಾದ ಮೇಲೆ ಒಂದರಂತೆ ಲೋಹಶಿಲ್ಪಗಳು ಬರತೊಡಗಿದವು. ತಮ್ಮ ಸ್ವಂತ ಕಾಲ ಮೇಲೆ ತಾವು ನಿಲ್ಲಬಹುದೆಂಬ ಆತ್ಮ ವಿಶ್ವಾಸ ಬೆಳೆಯತೊಡಗಿದವು ಎಂಬ ನೆನಪಿನ ಬುತ್ತಿಯನ್ನು ಬಿಚ್ಚುತ್ತಾ ಹೋಗುತ್ತಾರೆ.

**ಹುಟ್ಟಿದೂರಿನತ್ತ ಪಯಣ :** ಸ್ವಂತ ನೆಲೆಯಾದ ನಾಗಮಂಗಲವು ದಿವಾನರಾಗಿದ್ದ ಸರ್ ಮಿರ್ಜಾ ಇಸ್ಮಾಯಿಲ್ ಅವರ ಕೃಪಾದೃಷ್ಟಿಯಿಂದ ಹಿತ್ತಾಳೆ ಕೇಂದ್ರವಾಗಿತ್ತು. ಅನೇಕ ಶಿಲ್ಪಿಗಳಿಗೆ ಆಶ್ರಯ ತಾಣವಾಗಿ, ಜೀವನೋಪಾಯದ ಮಾರ್ಗ ಒದಗಿಸಿತ್ತು. ಇಲ್ಲಿ ತಯರಾದ ಲೋಹಶಿಲ್ಪಗಳು ನಾಡಿನಾದ್ಯಂತ ಹಾಗೂ ಹೊರಗೆ ಬೇಡಿಕೆ ಯುಳ್ಳವುಗಳಾಗಿದ್ದವು. ನೀಲಕಂಠಾಚಾರ್ಯರು ಮತ್ತೆ ಹೋಗಿ ಅಲ್ಲಿ ನೆಲೆಸಿದ ಮೇಲೆ ಅದರ ಕೇಂದ್ರ ಬಿಂದುವಾದರು. ಯುವ ಶಿಲ್ಪಿಗಳನ್ನು ಕೂಡಿಸಿಕೊಂಡು ಪ್ರೋತ್ಸಾಹಿಸುತ್ತಾ, ಹಾಗೆಯೇ ಹಿರಿಯ ಶಿಲ್ಪಿಗಳ ಮಾರ್ಗದರ್ಶನ ಪಡೆಯುತ್ತಾ ಬಂದಂತಹ ಇವರು ಯಾವುದೇ ಕೆಲಸ ಬಂದರೂ ಬಿಡದೆ ವೃದ್ಧಿಗೊಳಿಸುತ್ತಾ ಬಂದರು. ಆ ಸಂದರ್ಬದಲ್ಲಿ ರಚಿಸಿದ ಶಿವಶಂಕರ ಲೀಲಾ ನೃತ್ಯದ ಪಂಚಲೋಹದ ವಿಗ್ರಹ ಅನೇಕ ರಾಷ್ಟ್ರ ನಾಯಕರ ಮೆಚ್ಚುಗೆಗೆ ಪಾತ್ರವಾಯಿತು.

ನಾಗಮಂಗಲದ ಖ್ಯಾತಿಯನ್ನು ಗಮನಿಸಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಒಮ್ಮೆ ಹಿತ್ತಾಳೆ ಕೇಂದ್ರಕ್ಕೆ ಬೇಟಿ ನೀಡಿ ಮೆಚ್ಚುಗೆ ವ್ಯಕ್ತಪಡಿಸಿದರು.

ಂಚಲೋಹದ ಕೆಲಸ ಮತ್ತು ಹಿತ್ತಾಳೆ ಕೆಲಸದಂತಹ ಕರಕುಶಲ ಕೆಲಸಗಳು ಮುಂದಿನ
ೀಳಿಗೆಗೆ ಅತ್ಯಾವಶ್ಯಕವಾಗಿ ಸ್ವತಂತ್ರ ಉದ್ಯೋಗ ಮಾಡಲು ಬೇಕಾದಂತಹವುಗಳು.
ವುಗಳ ಕಲಿಕೆಯಿಂದ ವ್ಯಕ್ತಿಗತ ಬೆಳವಣಿಗೆ ಆಗುವುದರ ಜೊತೆಗೆ ನಾಡಿನ ಕಲಾಸಂಸ್ಕೃತಿ
ಳೆಯಲು ಸಹಕಾರಿಯಾಗುತ್ತದೆಂಬ ದೃಷ್ಟಿಯಿಂದ ಕರಕುಶಲ ಕಲಾ ತರಬೇತಿ
ಾಲೆಯನ್ನಾಗಿ ಪರಿವರ್ತಿಸುವ ಕೆಲಸವನ್ನು ಮಾಡಿದರು.

**ಒಗ್ಗದ ತರಬೇತಿಶಾಲೆ :** ಉದ್ದೇಶ ಘನವಾದದ್ದೆ, ಆದರೇ ಆದದ್ದೆ ಬೇರೆ.
ದಾಯ ಮೂಲ ಮಾಡಿಕೊಂಡಿದ್ದ ಹಿತ್ತಾಳೆ ಕೇಂದ್ರದಿಂದ ದೂರ ಸರಿಯಬೇಕಾದ
ನಿವಾರ್ಯತೆ ಬಂತು. ಅದನ್ನೇ ನಂಬಿಕೊಂಡು ಕೆಲಸ ಮಾಡುತ್ತಿದ್ದ ಅನೇಕ ಶಿಲ್ಪಿಗಳಿಗೆ
ುಂಗಲಾರದ ತುತ್ತಾಯಿತು. ಸರ್ಕಾರಿ ಕಾನೂನಿನ್ವಯ ಓದಿದವರು ತರಬೇತಿ ಪಡೆದ
ರ್ಹತಾ ಪತ್ರ ಹೊಂದಿರುವವರು ಮಾತ್ರ ಶಿಕ್ಷಕರಾಗಬೇಕಾದ ಪರಿಸ್ಥಿತಿ
ರ್ಮಾಣವಾಯಿತು. ಇವೆಲ್ಲವೂ ಸಂಪ್ರದಾಯ ಶಿಲ್ಪಿಗಳಿಗೆ ಮುಜುಗರವೆನಿಸಿತು.
ತ್ತಾಳೆ ಕೇಂದ್ರದಲ್ಲಿದ್ದವರೆಲ್ಲಾ ತಮ್ಮ ತಮ್ಮ ನೆಲೆಯನ್ನು ಅರಸುತ್ತಾ ಬೇರೆಡೆಗೆ
ೊರಟರು. ನೀಲಕಂಠಾಚಾರ್ಯರು ಚಾಮರಾಜೇಂದ್ರ ವೃತ್ತಿಕಲಾ ಶಿಕ್ಷಣ ಶಾಲೆಯಲ್ಲಿ
ರಬೇತಿ ಪಡೆದವರಾದ್ದರಿಂದ ನಾಗಮಂಗಲದ ಶಾಲೆಯನ್ನು ನೋಡಿಕೊಳ್ಳಲು ಆಹ್ವಾನ
ಂದಿತು. ಆದರೇ ನೀಲಕಂಠಾಚಾರ್ಯರೇ ಮನಸ್ಸು ಮಾಡಲಿಲ್ಲ. ಸ್ವತಂತ್ರ ಬದುಕನ್ನು
ೂಪಿಸಿಗೊಳ್ಳಬೇಕೆಂಬ ಹಂಬಲದಿಂದ ಯುವಶಿಲ್ಪಿಗಳನ್ನು ಒಂದೆಡೆ ಸೇರಿಸಿ 'ಶಿಲ್ಪ
ಲಾ ಸಹೋದರರ ಸಂಘ' ಸ್ಥಾಪಿಸಿದರು. ಅದರ ಮೂಲಕ ಪ್ರದರ್ಶನಕ್ಕೆ ಕಳುಹಿಸುವುದು
ುತ್ತು ವಿಗ್ರಹಗಳ ಬೇಡಿಕೆಗೆ ಅನುಗುಣವಾಗಿ ಮಾಡಿಕೊಡುವ ಅಥವಾ
ಮಾಡಿಸಿಕೊಡುವ ಕೆಲಸವನ್ನು ಮಾಡಿದರು. ಗ್ರಾಹಕ ಮತ್ತು ಶಿಲ್ಪಿಯ ನಡುವೆಯ
ೇತುವೆಯಾಗಿ ಸಾಕಷ್ಟು ಕೆಲಸ ಮಾಡಿದ ನೀಲಕಂಠಾಚಾರ್ಯರು ನಿರೀಕ್ಷಿತ ಪಲಿತಾಂಶ
ೊರೆಯದ ಕಾರಣ ಬೆಂಗಳೂರಿನತ್ತ ೧೯೬೩ರಲ್ಲಿ ತಮ್ಮ ಪ್ರಯಾಣ ಬೆಳೆಸಿದರು.

**ಬದಕಲು ಬೆಂಗಳೂರಿಗೆ :** ಬೆಂಗಳೂರಿಗೆ ಬಂದೊಡನೆಯೇ ಡಿಸೈನ್
ೆಂಟರ್‌ನಲ್ಲಿ ಕೆಲಸ ದೊರಕಿತು. ಆಗ್ಗೆ ದಿನಕ್ಕೆ ೬ರೂ ಸಂಬಳ. ದಿನಗೂಲಿ ನೌಕರರ
ೀತಿ ಸೇರ್ಪಡೆಯಾದುದರಿಂದ ಅಧಿಕವಾಗಿ ಕೇಳುವಂತಿರಲಿಲ್ಲ. ಕಾರ್ಮಿಕನಿಗೆ
ಇರಬೇಕಾದ ಸೌಲಭ್ಯವೂ ಇರಲಿಲ್ಲ. ಉತ್ತಮ ಕೆಲಸವೆಂದು ಕಂಡು ಬಂದವರಿಗೆ
ಮಾತ್ರ ಸಂಬಳಹೆಚ್ಚಳ. ನಾನು ಸೇರಿದ ಮೂರ್ನಾಲ್ಕು ತಿಂಗಳ ಒಳಗಾಗಿ ನನಗೆ
೧೦ರೂ ಸಂಬಳಕ್ಕೇರಿಸಿದರು. ನನಗೆ ಒಂದು ರೀತಿ ಸಂತೋಷ ಆಶ್ಚರ್ಯ ಒಮ್ಮೆಗೆ

ಆಯಿತು. ನನ್ನ ಜೊತೆಯಲ್ಲಿ ಸೇರಿದ್ದ ಅನೇಕರಿಗೆ ಮತ್ತು ನನಗಿಂತ ಮೊದಲೆ ಸೇರಿದ್ದವರಿಗೆ ಯಾರಿಗೂ ೧೧೦ರೂ ಕೊಡುತ್ತಿರಲಿಲ್ಲ. ೩ರೂ ನಿಂದ ೮ರೂ ವರೆಗೆ ಮಾತ್ರ ಕೊಡುತ್ತಿದ್ದರು.

**ದಿನಗೂಲಿಯ ಕೆಲಸ :** ಇಲ್ಲಿ ಸಂಘಟನೆಗೆ ಅವಕಾಶವಿರಲಿಲ್ಲ. ಆಡಳಿತ ವರ್ಗ ದಿನಗೂಲಿಗಳಿಗೆ ಹಣಕಾಸು ಒದಗಿಸಲು ಸಾಧ್ಯವಿಲ್ಲವೆಂಬ ಕಾರಣ ಒಡ್ಡಿ ಕೆಲಸದಿಂದ ಎಲ್ಲರನ್ನು ತೆಗೆದು ಹಾಕಿದರು. ಪ್ರತಿಬಟನೆಗೆ ಅವಕಾಶವಿಲ್ಲದ ಕಾರಣ ತಮ್ಮ ತಮ್ಮ ಹೀನ ಅದೃಷ್ಟವೆಂದು ಪರಿತಪಿಸುತ್ತಾ ಕೆಲವರು ಹೊರಬಂದರೇ ಮತ್ತೇ ಕೆಲವರು ಇದನ್ನು ಸವಾಲಾಗಿ ಸ್ವೀಕರಿಸಿ ದಿಟ್ಟತನದಿಂದ ಸ್ವಯಂ ಉದ್ಯೋಗ ಮಾಡಲು ಉಪಕ್ರಮಿಸಿದರು. ಅಂತಹವರಲ್ಲಿ ನೀಲಕಂಠಾಚಾರ್ ಮೊದಲಿಗರು. ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಸ್ವತಂತ್ರವಾಗಿ ಶಿಲ್ಪಗಳನ್ನು ಮಾಡಿದ್ದ ಇವರಿಗೆ ಕಷ್ಟವೆನಿಸಲಿಲ್ಲ. ಸ್ವತಂತ್ರವಾಗಿ ಲೋಹಶಿಲ್ಪ ಮಾಡಲು ಆರಂಬಿಸಿದ ನಂತರ ಬೇಡಿಕೆಗಳು ಜಾಸ್ತಿಯಾದವು. ನಾಲ್ಕೈದು ವರ್ಷ ಹೀಗೆ ಮಾಡುತ್ತಿರುವಾಗ ಒಂದು ದಿನ ಅನಿರೀಕ್ಷತವಾಗಿ ಡಿಸೈನ್ ಸೆಂಟರ್‌ನಿಂದ ಕರೆ ಬಂತು. ಲೋಹ ವಿಭಾಗದ ಮುಖ್ಯಕಲಾಕಾರರಾಗಿದ್ದ ಭಾಷ್ಯಂ ಸ್ಥಪತಿ ಎಂಬುವರು ಇಲ್ಲಿನ ಕೆಲಸ ತೊರೆದು ಮದ್ರಾಸಿಗೆ ಹೋದಕಾರಣ ಆ ಸ್ಥಾನವನ್ನು ತುರ್ತಾಗಿ ತುಂಬ ಬೇಕಾಗಿತ್ತು. ಆಗ ಆಡಳಿತ ವರ್ಗದ ಗಮನಕ್ಕೆ ಪ್ರಥಮವಾಗಿ ಬಂದವರೆಂದರೇ ನೀಲಕಂಠಾಚಾರ್ ಮಾತ್ರ.

**ಮತ್ತೇ ಆಹ್ವಾನ :** ಮೇಲಿಂದ ಮೇಲೆ ಒತ್ತಾಯ ಬಂದ ಕಾರಣ ಒಪ್ಪಿಕೊಂಡರು. ಆಗ್ಗೆ ಅವರಿಗೆ ೪೫೦ರೂ ಮಾಸಿಕ ಸಂಬಳ. ನೀಲಕಂಠಾಚಾರ್ ಲೋಹ ಕೆಲಸದಲ್ಲಿ ಹೆಚ್ಚಿನ ಖ್ಯಾತಿ ಜನಪ್ರಿಯತೆ ಗಳಿಸಿಕೊಂಡಿದ್ದ ಕಾರಣ ವಿಗ್ರಹಗಳನ್ನು ಮಾಡಿಸಲು ಜನ ಬರುತ್ತಿದ್ದರು. ಅವರಿಗೆ ಸಮಯವಿಲ್ಲವೆಂದು ಹೇಳಿ ಕಳಿಸಲು ಮನಸ್ಸು ಬಾರದೇ, ತಮ್ಮ ದೈನಂದಿನ ಡಿಸೈನ ಸೆಂಟರ್ ಕೆಲಸದ ನಂತರ ಮನೆಯಲ್ಲಿಯೇ ಮಾಡ ತೊಡಗಿದರು. ಹೀಗೆ ಸುಮಾರು ೩ ವರ್ಷ ಕೆಲಸ ಮಾಡಿದರು.

**ಸ್ವಂತ ಉದ್ಯೋಗದೆಡೆಗೆ :** ಅವರು ಕೊಡುವ ಸಂಬಳ ಸಾಲುತ್ತಿರಲಿಲ್ಲ. ಮನೆಯಲ್ಲಿ ಕುಟುಂಬ ಬೆಳೆದಿತ್ತು. ಏಳೆಂಟು ಮಕ್ಕಳು ಒಂದಾದ ಮೇಲೆ ಒಂದು ಬೆಳೆದು ನಿಂತಿದ್ದವು. ಅವರ ಸಮಸ್ತ ಹಾಗೂ ಹೋಗುಗಳ ಬಗ್ಗೆ ನಿಗಾ ವಹಿಸುವುದು ಅತ್ಯಾವಶ್ಯಕವಾಗಿತ್ತು. ಯಾವುದಾದರೂ ಕೆಲಸ ಹಿಡಿದರೇ ಸಕಾಲದಲ್ಲಿ ಮಾಡಿಕೊಡಲು ದೈನಂದಿನ ಡಿಸೈನಸೆಂಟರ್ ವೃತ್ತಿ ಅಡ್ಡಿಬರುತ್ತಿತ್ತು. ಹೆಚ್ಚಿನ ಸಮಯ ಅದರಲ್ಲೇ

ತೆಯುತ್ತಿದ್ದುದರ ಪರಿಣಾಮ ಮನೆಯಲ್ಲಿ ಖಾಸಗಿ ಕೆಲಸ ಮಾಡಲು ಸಮಯಾ-
ಭಾವವಾಗುತ್ತಿತ್ತು. ಇರುವ ಕೆಲಸ ಬಿಟ್ಟರೇ ಸದಾಕಾಲ ಬೇಡಿಕೆ ಇರುತ್ತದೋ ಇಲ್ಲವೋ
ಮುಂದಿನ ಜೀವನ ನಿರ್ವಹಣೆ ಹೇಗೆ ಎಂಬ ಪ್ರಶ್ನೆ ಒಂದೆಡೆ ಆದರೇ, ಬಂದಂತಹ
ಕೆಲಸ ಮಾಡುವುದಕ್ಕೆ ಬಿಡುವು ಇಲ್ಲವಲ್ಲ ಎಂಬ ಚಿಂತೆ ಮತ್ತೊಂದೆಡೆ. ಈ ದ್ವಂದ್ವ
ತಿಕಲಾಟದಲ್ಲಿ ಕೊನೆಗೆ ನಿರ್ಧರಿಸಿದುದು ಏನಾದರಾಗಲೀ ಸ್ವತಂತ್ರವಾಗಿ ಮಾಡೋಣ
ಎಂಬ ದೃಢ ನಿಲವು. ಪ್ರಾರಂಬದಲ್ಲಿ ಕಷ್ಟವೆನಿಸಿದರೂ ಹಂತಹಂತವಾಗಿ ಕೆಲಸಗಳು
ಬರತೊಡಗಿದವು. ಮಕ್ಕಳು ತಂದೆಗೆ ಸಹಾಯಕರಾದರು. ತೆಗೆದು ಕೊಂಡ ದೃಢ
ನಿರ್ಧಾರ ಫಲಕೊಡಲು ಆರಂಬಿಸಿದವು.

**ಕೆಲಸದಲ್ಲಿ ನಿಖರತೆ** : ಲೋಹವಿಗ್ರಹಗಳನ್ನು ಕುರಿತು ಅತ್ಯಂತ ನಿಖರವಾದ
ಅಭಿಪ್ರಾಯವನ್ನು ವ್ಯಕ್ತಪಡಿಸುವ ನೀಲಕಂಠಾಚಾರ್. ವಿಗ್ರಹ ಮಾಡುವಾತನು ಕೆಲವು
ಗುಣಲಕ್ಷಣಗಳನ್ನು ಕಡ್ಡಾಯವಾಗಿ ಅರಿತಿರಬೇಕೆನ್ನುತ್ತಾರೆ. ಪೂರ್ವ ಸಿದ್ದತೆ ಇಲ್ಲದೇ
ಕಾರ್ಯೋನ್ಮುಖವಾಗುವುದರಿಂದ ಯಾವುದೇ ಹಂತದಲ್ಲಿ ನಿಲುಗಡೆಹೊಂದಿ,
ಮಾಡುವಾತನಿಗೆ ಹಾಗೂ ಮಾಡಿಸುವಾತನಿಗೆ ಮಾನಸಿಕ ಕ್ಲೇಶವುಂಟಾಗುವ
ಸಂದರ್ಭಗಳು ಹೆಚ್ಚು. ಅದಕ್ಕಾಗಿಯೇ ನಮ್ಮ ಪೂರ್ವಿಕರು, ಶಾಸ್ತ್ರಜ್ಞರು ಹೀಗೆಹೇಳುತ್ತಾರೆ.

> ಶೈಲಜಂ ಪ್ರತಿಮಂ ಚೇತ್ತು ಶಿಲಾಗ್ರಹಣ ಪೂರ್ವಕಮ್
> ಲೋಹಜಂ ಸಕಲಂ ಚೇತ್ತು ಮಧೂಚ್ಛಿಷ್ಟೇನ ನಿರ್ಮಿತಮ್.
>
> \- ಕಾಶ್ಯಪಶಿಲ್ಪಶಾಸ್ತ್ರ

ವಿಗ್ರಹಗಳನ್ನು ಕಲ್ಲಿನಲ್ಲಿ ಮಾಡಬೇಕೆಂದಿದ್ದರೇ ಮೊದಲು ಶಿಲಾಸಂಗ್ರಹಣ
ಮಾಡಬೇಕು. ಅದೇ ಲೋಹದಲ್ಲಿ ಮಾಡಬೇಕೆಂದಿದ್ದರೇ ಮೊದಲು ಮೇಣದಿಂದ
ಮೂರ್ತಿ ನಿರ್ಮಾಣ ಮಾಡಬೇಕು ಹತ್ತಾರು ಅಡಿ ಎತ್ತರದ ಕಲ್ಲಿನವಿಗ್ರಹ
ಮಾಡಬೇಕೆಂದು ಬಯಸಿದಲ್ಲಿ ಮೊದಲು ಅದು ಎಲ್ಲಿ ಸಿಗುತ್ತದೆ ಹೇಗೆ ತರಬೇಕು
ಯೋಚಿಸಿ ಅದರ ಸಂಗ್ರಹಣೆ ಮಾಡಿದ ನಂತರವೇ ಕೆಲಸ ಮಾಡಲು ಸಾದ್ಯ. ಅದರ
ಮೃದುತ್ವ, ಕಾಠಿಣ್ಯ, ಓರೆ ಕೋರೆಗಳು, ಒಳಪರೆ, ಹೊರಪರೆ ಇತ್ಯಾದಿ
ಗುಣಲಕ್ಷಣಗಳನ್ನು ಅವಲೋಕಿಸಿ, ನಮ್ಮ ಅಗತ್ಯಕ್ಕೆ ತಕ್ಕಂತೆ, ದೊರಕಿದ ಕಲ್ಲಿನ
ಆಕಾರಕ್ಕೆ ಅನುಗುಣವಾಗಿ ಕಲ್ಲನ್ನು ದುಡಿಸಿಕೊಳ್ಳುವ ಯತ್ನ ಮಾಡಬೇಕು.
ಹಾಗಾದಾಗಲೇ ಕಡೆದ ವಿಗ್ರಹಕ್ಕೊಂದು ಕಿಮ್ಮತ್ತುದೊರಕುತ್ತದೆ. ಸಕಲಾಜನಾಬಿಷ್ಟ
ವಾಗುತ್ತದೆ.

ಆದರೇ ಲೋಹದಲ್ಲಿ ಹಾಗಲ್ಲ. ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆ ಹೀಗೆ ಹಲವಾರು ರೀತಿಯ ಲೋಹಗಳಿರುವುದರಿಂದ ಲಭ್ಯವಿರುವ ಲೋಹದಲ್ಲಿ ಮಾಡಬಹುದು, ಅಥವಾ ಸಮ್ಮಿಶ್ರಣ ಲೋಹದಿಂದಲೂ(ಪಂಚಲೋಹ)ಸಹ ಮಾಡಬಹುದಾಗಿದ್ದು, ಅದರ ಮೂಲ ರಚನೆಗೆ ಮಾತ್ರ ಮೇಣ ತುಂಬಾ ಅವಶ್ಯಕ. ಮೇಣದಿಂದ ಪ್ರಥಮವಾಗಿ ವಿಗ್ರಹ ರಚಿಸಿಕೊಳ್ಳದೇ ಲೋಹಶಿಲ್ಪ ಮಾಡಲು ಸಾದ್ಯವಿಲ್ಲ.

**ತಾಳಮಾನಗಳು** : ನೀಲಕಂಠಾಚಾರ್ ಅವರು ಶಿಲೆ ಮತ್ತು ಲೋಹ ವಿಗ್ರಹಗಳ ತಾಳಮಾನ ಪ್ರಮಾಣ ಕುರಿತು ವ್ಯಾಖ್ಯಾನಿಸುತ್ತಾ ಉತ್ತಮ ದಶತಾಲದಲ್ಲಿ ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಕೂಡಿಸಬೇಕು, ಮದ್ಯಮ ದಶ ತಾಲದಲ್ಲಿ ಸ್ತ್ರೀದೇವತಾಮೂರ್ತಿಗಳಾದ ಲಕ್ಷ್ಮೀ, ಸರಸ್ವತಿ, ಪಾರ್ವತಿ, ದುರ್ಗಿ, ಚಾಮುಂಡಿ ಮುಂತಾದ ಸ್ತ್ರೀ ಶಿಲ್ಪಗಳನ್ನು ಮಾಡಬೇಕು. ಕಾರಣ ಪುರುಷ ಮತ್ತು ಸ್ತ್ರೀ ಒಂದೇ ಎತ್ತರವಿರಬಾರದು, ಸ್ತ್ರೀ ಪುರುಷನಿಗಿಂತ ಸ್ವಲ್ಪ ಅಳತೆಯಲ್ಲಿ ಕಡಿಮೆ ಇರಬೇಕೆಂಬುದು ಅವರ ಅಭಿಪ್ರಾಯ.

ಇನ್ನು ಪುರಾಣಗಳ ಕಲ್ಪನೆಯಲ್ಲಿ ಬರುವ ರಾಕ್ಷಸರು, ಸಿದ್ಧಪುರುಷರು, ಗಂಧರ್ವರು ಇವುಗಳಿಗೆ ನವತಾಲಗಳಲ್ಲಿಯೂ, ಸಾದಾರಣವಾದ ಮನುಷ್ಯರನ್ನು ಅಷ್ಟತಾಲಗಳಲ್ಲಿ ಪಿಶಾಚಿ ಮುಂತಾದ ದೃಗ್ಗೋಚರವಾದಂತಹುಗಳಿಗೆ ಸಪ್ತ ತಾಳವು, ಗಣಪತಿ ಮುಂತಾದ ಕುಬ್ಜವಿಗ್ರಹಗಳಿಗೆ ಪಂಚತಾಳ ಅಥವಾ ಷಟತಾಳದಲ್ಲಿಯೂ, ಬಾಲಕರನ್ನು ನಾಲ್ಕು ತಾಳದಲ್ಲಿಯೂ ರೂಪಿಸಬೇಕು ಅನ್ನುತ್ತಾರೆ. ಈ ಕ್ರಮ ಶಿಲಾಶಿಲ್ಪಕ್ಕು ಮತ್ತು ಲೋಹಶಿಲ್ಪಕ್ಕು ಅನ್ವಯಿಸುವಂತಹದಾಗಿದ್ದು, ಆಯಾಯ ಸಂದರ್ಭಕ್ಕನುಗುಣವಾಗಿ ಅಳತೆಗಳಲ್ಲಿ ಕಿರು ವ್ಯತ್ಯಾಸವಾದರೂ ಒಟ್ಟಂದಕ್ಕೆ ಪೂರಕವಾಗಿರಬೇಕು ಅನ್ನುತ್ತಾರೆ.

**ಅಳತೆಗಳು** : ಇನ್ನು ಶಾಸ್ತ್ರದ ಪ್ರಕಾರವೇ ಹೇಳುವುದಾದರೇ ಪ್ರತಿ ವಿಗ್ರಹಮಾಡಬೇಕಾದರೇ ಉಷ್ಣೀಷ(ನೆತ್ತಿಯ ತುದಿ)ದಿಂದ ಹಿಡಿದು ಪಾದದವರೆಗೆ ವಿವರಗಳಿವೆ. ಮುಖರಚನೆಯಲ್ಲಿಯೇ ಕಣ್ಣುಗಳ ಅಂತರ, ಮೂಗಿನ ಎತ್ತರ, ಬಾಯಿಯ ಅಗಲ, ಹಣೆಯ ಉದ್ದಗಲ, ಕೇಶ, ಕಪೋಲ, ಗಲ್ಲ, ಕರ್ಣ, ಇವೆಲ್ಲವುಗಳ ವ್ಯತ್ಯಯ, ಗುಣಲಕ್ಷಣಗಳು ವಿವರ ತಿಳಿಯಬೇಕು. ದೇಹ ರಚನೆಯಲ್ಲಿಯೂ ಸಹ ಕತ್ತು ಎದೆಯ ಅಳತೆ, ನಾಭಿ, ತೊಡೆ, ಮಂಡಿ, ಕಾಲು, ಕೈ, ತೋಳು, ಬುಜ, ಹಸ್ತಗಳು, ಪಾದಗಳು ಇವುಗಳಿಗೆಲ್ಲಾ ಅಳತೆಗಳಿವೆ. ಇವುಗಳನ್ನು ಯಾವುದೇ ವಿದ್ಯಾರ್ಥಿ ಅಭ್ಯಾಸದ ನಂತರವೇ ಅವನು ಬರೆದ ಚಿತ್ರಕ್ಕಾಗಲೀ, ಕಡೆದ ಶಿಲ್ಪಕ್ಕಾಗಲೀ ಕಲಾ ಮೌಲ್ಯ ಒದಗುತ್ತದೆ.

ವೆಲ್ಲವನ್ನು ಸದಾ ಗಮನಿಸಲು ಸಾಧ್ಯವೇ ಎಂಬ ಮಾತು ಕೆಲ ಯುವ ಚಿತ್ರಗಾರರಲ್ಲಿ, ಲ್ಪಿಗಳಲ್ಲಿ ಬರುತ್ತದೆ. ಸದಾ ಇಂಚುಪಟ್ಟಿಯಿಟ್ಟು ಅಳತೆಮಾಡಲು ಸಾಧ್ಯವಿಲ್ಲದಿದ್ದರೂ ಪ್ರಾರಂಭಿಕ ಹಂತದಲ್ಲಿ ಇವೆಲ್ಲವನ್ನು ಗಮನದಲ್ಲಿಟ್ಟುಕೊಂಡು ಅಭ್ಯಸಿಸಿ, ನಂತರ ದಾ ಕಾರ್ಯ ಪ್ರವೃತ್ತರಾಗುವ ಮೂಲಕ ಆ ಅಳತೆಗಳು ಕರಗತವಾಗುತ್ತವೆ. ಂಗೀತವನ್ನೇ ತೆಗೆದುಕೊಳ್ಳಿ, ಪ್ರಾರಂಬದಲ್ಲಿ ತಾಳಗಳ ಕಡೆ, ಆರೋಹಣದ ಅವರೋಹಣದ ಕಡೆಗೆ ತೀವ್ರಾ ನಿಗಾ ಇಡಬೇಕಾಗುತ್ತದೆ. ಕ್ರಮೇಣ ತಾಳಗಳು ತಾನಾಗಿಯೇ ಸಂಗೀತಗಾರನಲ್ಲಿ ಮೇಳೈಸಿ, ಉಸಿರಿನ ಏರಿಳಿತಗಳ ಮೂಲಕ ಸ್ವರ ಸಂಚಾರಗೈದು ರಾಗಾನುಭವದ ಪರಾಕಾಷ್ಟೆ ಮುಟ್ಟುತ್ತಾನೆ.

ಹಾಗೆಯೇ ಶಿಲ್ಪಿಯೂ ಸಹ, ಶಿಲಾಶಿಲ್ಪವೇ ಆಗಲೀ ಲೋಹಶಿಲ್ಪವೇ ಆಗಲೀ, ಶಿಲ್ಪರಚನೆ ಮೂಲಕ ತಾನು ತಾನಾಗಿಯೇ ತನ್ಮಯತೆಯಿಂದ ಆ ಶಿಲ್ಪದ ಪೂರ್ಣ ರೂಪವನ್ನು ಕಣ್ಣಲ್ಲಿ ತುಂಬಿಕೊಂಡು, ರಚಿಸುವುದರಿಂದ ಶ್ರೇಷ್ಟವೆಂದೆನಿಸುತ್ತದೆ. ಹಾಗೆಯೇ ರೂಪಿಸಿದ ಶಿಲ್ಪವು ನೋಡುಗನಿಗೆ ಆನಂದ ತರುತ್ತದೆ.

**ನೇತ್ರ ಪ್ರಮಾಣ :** ಪ್ರಮಾಣ ಬದ್ಧವಾದ ಅಭ್ಯಾಸವಿಲ್ಲದವರಿಂದ ರಚಿತವಾದ ಶಿಲ್ಪಗಳಿಂದ ಮಾಡಿಸಿದವರಿಗೂ, ಅದನ್ನು ಸದಾ ಅರ್ಚಿಸುವವರಿಗೂ ಮೇಲಾಗಿ ಮಾಡಿದವನಿಗೂ ಹಾನಿಯುಂಟಾಗುತ್ತದೆ. ನಾವು ಬೇವನ್ನು ಬಿತ್ತಿ ಮಾವನ್ನು ಪಡೆಯಲು ಸಾಧ್ಯವಿಲ್ಲ ಅಲ್ಲವೆ ಎಂದು ಪ್ರಶ್ನಿಸುತ್ತಾರೆ ನೀಲಕಂಠಾಚಾರ್ ಅವರು. ಮುಖರಚನೆಗಿಂತ ಹೆಚ್ಚಿನ ಗಮನ ವಹಿಸಬೇಕಾದದ್ದು ನೇತ್ರಗಳ ರಚನೆ. ಶಿಲಾಶಾಸ್ತ್ರದಲ್ಲಿ ನೇತ್ರೋನ್ಮಿಲನಕ್ಕೆ ವಿಶೇಷ ಆದ್ಯತೆಯುಂಟು.

ಕರ್ತೃನಾಶ ಮಧೋದೃಷ್ಟಿ ರೂರ್ಧ್ವ ದೃಷ್ಟಿಪತ್ಕರಮ್<br>
ಬಂಧುನಾಶಂ ಭವೇತ್ ಪಾರ್ಸ್ವದೃಷ್ಟಿ ಶ್ಚೇದ್ಸಾಮನಾಶನಮ್<br>
ತಸ್ಮಾತ್ಸರ್ಪ ಪ್ರಯತ್ನೇನ ಸಮಮೇವ ನಿರೀಕ್ಷಣಮ್

(ಕಾಶ್ಯಪ ಶಿಲ್ಪಶಾಸ್ತ್ರ)

ಪ್ರತಿಮೆಯ ದೃಷ್ಟಿಯು ಕೆಳಕ್ಕಿದ್ದರೇ, ಆ ಪ್ರತಿಮೆಯನ್ನು ಮಾಡಿಸಿದ ಕರ್ತೃವಿಗೆ ಹಾನಿ, ಮೇಲಿನ ದೃಷ್ಟಿಯಿದ್ದರೇ ಆಪತ್ತು, ಒಂದು ಪಕ್ಕಕ್ಕೆ ದೃಷ್ಟಿ ಇದ್ದರೆ ಬಂಧುನಾಶ ಇನ್ನೊಂದು ಪಕ್ಕಕ್ಕೆ ಹೊರಳಿದ್ದರೇ ಆ ಪ್ರತಿಮೆ ಸ್ಥಾಪಿತವಾಗುವ ಸ್ಥಳ, ಗ್ರಾಮ, ಊರುಗಳಿಗೆ ನಷ್ಟ, ಆದ್ದರಿಂದ ಎಚ್ಚರ ವಹಿಸಿ ಪ್ರತಿಮೆಗೆ ಸಮದೃಷ್ಟಿಯನ್ನೇ ಇಡಬೇಕು, ಇಡುವಾತನ ಅರ್ಥಾತ್ ಶಿಲ್ಪಿಯ ಮನಸ್ಸು ಸಮಚಿತ್ತವಾಗಿರಬೇಕು. ವಿಕಲ್ಪಗೊಳ

ಗಾದವನ ಮನದವನು ನೇತ್ರ ಸೃಷ್ಟಿಸುವುದರಿಂದ ಮನೋ ವಿಕಾರಕ್ಕೆ ತಕ್ಕಂತೆ ಶಿಲ್ಪವೂ ರೂಪಿತವಾಗುವುದರಲ್ಲಿ ಸಂದೇಹವಿಲ್ಲವೆನ್ನುತ್ತಾರೆ.

**ಲೋಹಗಳ ಬಳಕೆ :** ಪಂಚಲೋಹದ ವಿಗ್ರಹ ಎಂಬ ಮಾತು ಎಲ್ಲಾ ಕಡೆ ಬರುತ್ತದೆ. ನಿಜವಾಗಿಯೂ ಪಂಚಲೋಹಗಳೇ ಬಳಕೆಯಾಗಿದೆಯೇ ಎಂದು ನಾವು ಪ್ರಶ್ನಿಸಿಕೊಳ್ಳ ಬೇಕಾಗಿದೆ. ಸದ್ಯದ ಪರಿಸ್ಥಿತಿಯಲ್ಲಿ ಚಿನ್ನ, ಬೆಳ್ಳಿ, ತಾಮ್ರ, ಸೀಸ, ಕಬ್ಬಿಣಗಳನ್ನು ಕೂಡಿಸಿ ಕರಗಿಸಿ ಮಾಡುವವರು ಯಾರು ಇಲ್ಲ ಎಂದು ಬಾವಿಸಬೇಕಾಗಿಲ್ಲ. ಆದರೇ ಅತಿ ದುಬಾರಿ ಬೆಲೆ ಆಗಿರುವ ಚಿನ್ನವನ್ನು ಆಯಾಯ ಪ್ರಾಮಾಣಕ್ಕನುಗುಣವಾಗಿ ಹಾಕುವಷ್ಟು ಹಣ ನೀಡುವವರು ಹಾಗೂ ಪ್ರಾಮಾಣಿಕತೆಯಿಂದ ಮಾಡುವವರು ಯಾರು ಇಲ್ಲವಾದ್ದರಿಂದ ಪಂಚಲೋಹ ಎಂಬುದು ಹೆಸರಿಗೆ ಮಾತ್ರವಿದೆಯೇ ವಿನಃ ಬಳಕೆಯಲ್ಲಿಲ್ಲ ಅನ್ನುತ್ತಾರೆ.

ಇಂದು ನಾವು ಮಾಡುತ್ತಿರುವ ದೇವತಾಮೂರ್ತಿಗಳು, ಪೂಜಾಪರಿಕರಗಳು, ಹಿತ್ತಾಳೆ, ತಾಮ್ರ, ಬೆಳ್ಳಿ, ಚಿನ್ನ ಇವುಗಳಿಂದ ಕೂಡಿರುತ್ತವೆ. ಕಂಚು ಲೋಹಕ್ಕೆ ಸೇರಿದ್ದರೂ ಅದರಲ್ಲಿ ಒರಟುತನ, ಗಡಸುತನ ಅಧಿಕ. ಇದನ್ನು ಬೆಲ್ ಮೆಟಲ್ ಎಂದೂ ಸಹ ಕರೆಯುತ್ತಾರೆ. ಇದನ್ನು ಗಂಟೆ, ಜಾಗಟೆ, ಇತ್ಯಾದಿ ನಾದ ಹೊರಹೊಮ್ಮುವ ಪದಾರ್ಥ ತಯಾರು ಮಾಡಲು ಬಳಸುತ್ತಾರೆ. ನಯಗೆಲಸ, ಕುಶರಿಗೆಲಸ ಮಾಡಲು ಹೊರಟರೆ ಒಡೆದು ಹೋಗುವ ಸಾದ್ಯತೆ ಹೆಚ್ಚಾಗಿರುತ್ತದೆ. ನಮ್ಮ ಪೂರ್ವಿಕರು ಕಂಚಿನ ತಟ್ಟೆಯನ್ನು ಊಟಕ್ಕೆ ಬಳಸುತ್ತಿದ್ದರು. ಸ್ಟೀಲ್ ಎಲ್ಲಾ ಕ್ಷೇತ್ರಗಳಲ್ಲಿ ವ್ಯಾಪಕವಾಗಿ ಬಳಕೆ ಬಂದನಂತರ ಕಂಚಿನ ತಟ್ಟೆಯು ತನ್ನ ಅಸ್ಥಿತ್ವ ಕಳೆದು ಕೊಳ್ಳುತ್ತಾ ಬಂತೆಂದು ಹಿಂದಿನದನ್ನು ನೆನಸಿಕೊಳ್ಳತ್ತಾರೆ.

ಹಿತ್ತಾಳೆ, ತಾಮ್ರಕ್ಕಿಂತ ಬೆಳ್ಳಿ ಚಿನ್ನಗಳಲ್ಲಿ ಮಾಡುವ ವಿಗ್ರಹಗಳು ಹೆಚ್ಚು ನಯಗಾರಿಕೆಗೆ ಉಪಯುಕ್ತ. ನಾವು ಬೇಕಾದ ಹಾಗೆ ಅದನ್ನು ಹಿಗ್ಗಿಸಿ ಕುಗ್ಗಿಸಿ ಬಡಿದು ಸೂಕ್ಷ್ಮಾತಿ ಸೂಕ್ಷ್ಮ ನಕಾಶೆ ಕೆಲಸ ಮಾಡಬಹುದು ಎನ್ನುತ್ತಾರೆ. ಈ ಲೋಹಗಳಲ್ಲಿ ಸ್ಥಿತಿಸ್ಥಾಪನ ಶಕ್ತಿ (Elasticity) ಅಧಿಕವಾಗಿರುತ್ತದೆ. ನಾವು ನಿತ್ಯ ನೋಡುವ ಉಪಯೋಗಿಸುವ ಆಭರಣ ಅದೆಷ್ಟು ಕುಶರಿ ಕೆಲಸದಿಂದ ಕೂಡಿರುತ್ತದೆ. ಅವುಗಳ ಹಿನ್ನೆಲೆಯಲ್ಲಿ ಶಿಲ್ಪಿಯ ಕಲಾಪ್ರಜ್ಞೆ ಎಷ್ಟು ಇರುತ್ತದೆಂಬುದನ್ನು ಊಹಿಸಿ ಎನ್ನುತ್ತಾರೆ ನೀಲಕಂಠಾಚಾರ್ ಅವರು.

ಯಾವುದೇ ವಿಗ್ರಹ ಮಾಡಬೇಕಾದರೂ ಅನುಸರಿಸಬೇಕಾದ ಕ್ರಮ ಒಂದೇ ಆದರೂ ನಯಗೆಲಸಕ್ಕೆ ಹೆಚ್ಚು ಉಪಯುಕ್ತ ಬೆಳ್ಳಿ ಅನ್ನುತ್ತಾರೆ ತಮ್ಮ ಅನುಭವದ ಆದಾರದ ಮೇಲೆ. ಚಿನ್ನದ ವಿಗ್ರಹ ಮಾಡಿಸುವವರು ಅತಿ ವಿರಳವಾದರೂ ಬೆಳ್ಳಿಯ ವಿಗ್ರಹ ಮಾಡಿಸುವವರ ಸಂಖ್ಯೆ ಸಾಕಷ್ಟಿದೆ. ಬೆಳ್ಳಿ ವಿಗ್ರಹ ಪೂಜಿಸುವುದರಿಂದ ಶ್ರೇಯಸ್ಸು ಎಂಬ ಕಲ್ಪನೆ ಸಾಕಷ್ಟು ಜನರಲ್ಲಿ ಇರುವುದರಿಂದ ಚಿಕ್ಕದಾಗಲೀ, ದೊಡ್ಡದಾಗಲಿ ಒಂದು ವಿಗ್ರಹ ಮನೆಯಲ್ಲಿ ದೇವರ ಕೋಣೆಯಲ್ಲಿ ಇರಬೇಕೆಂಬ ಭಾವನೆ ವ್ಯಾಪಕವಾಗಿ ಬೆಳೆದಿದೆಯಾದ್ದರಿಂದ ಸರ್ವರಿಗೂ ಪ್ರಿಯ ದೇವರಾದ ಗಣಪತಿ, ನಾಗರಹೆಡೆ ಮತ್ತು ಲಿಂಗಗಳು ಅತಿಹೆಚ್ಚಿನ ಸಂಖ್ಯೆಯ ಬೇಡಿಕೆಯ ವಿಗ್ರಹಗಳಾಗಿವೆ. ಅತಿ ಸಣ್ಣ ಸಣ್ಣ ವಿಗ್ರಹಗಳನ್ನು ಅಚ್ಚಿನ ಮೂಲಕ ಹೆಚ್ಚಿನ ಪ್ರಮಾಣದಲ್ಲಿ (Mass Production) ಮಾಡಿ ಮಾರಾಟಗೊಳಿಸಬಹುದು. ಇಲ್ಲಿ ನಯಗಾರಿಕೆಯಾಗಲೀ, ಕುಶರಿ ಕೆಲಸವಾಗಲಿ ಮುಖ್ಯವೆನಿಸುವುದಿಲ್ಲ. ಒಟ್ಟಾರೇ ಆಕಾರವಿದ್ದರೇ ಸಾಕು. ಅದರ ಮೌಲ್ಯ ಕಡಿಮೆ ಇರಬೇಕು. ಅಂದರೇ ಕಡಿಮೆ ಮೊತ್ತಕ್ಕೆ ಜನಸಾಮಾನ್ಯನಿಗೆ ತೆಗೆದುಕೊಳ್ಳಲು ಸಾದ್ಯವಾಗುವಂತಹ ಬೆಲೆಯಾಗಬೇಕು. ಹಾಗಾದಲ್ಲಿ ಬೇಡಿಕೆಗಳು ಜಾಸ್ತಿ ಆಗುತ್ತವೆ. ಶಿಲ್ಪಿಗೂ ಆರ್ಥಿಕ ಮಟ್ಟ ಸುದಾರಿಸುತ್ತದೆ ಅನ್ನುತ್ತಾರೆ.

**ಮೇಣದ ಬಿಂಬ :** ಆದರೇ ಶಿಲ್ಪವನ್ನು ಉತ್ತಮ ಮಟ್ಟದಲ್ಲಿ ಮಾಡಬೇಕೆಂದು ನಿರ್ದರಿಸಿದಾಗ ಅಥವಾ ಗ್ರಾಹಕ ಬಯಸಿದಾಗ ಅದರ ಮೌಲ್ಯವೇ ಬೇರೆಯಾಗುತ್ತದೆ. ಪೂರ್ವ ಸಿದ್ದತೆಯು ಅಧಿಕವಾಗುತ್ತದೆ. ಎರಕಕ್ಕೆ ಹೋದನಂತರ ಬದಲಾವಣೆ ಮಾಡಲು ಸಾದ್ಯವಿಲ್ಲವಾದ್ದರಿಂದ ಯಾವ ಯಾವ ವಿಗ್ರಹ ಯಾವ ಸ್ವರೂಪದಲ್ಲಿ ಏನೇನು ಆಯುಧಗಳನ್ನು ಹಿಡಿದಿರಬೇಕು. ನಿಂತ ನಿಲವು, ಕುಳಿತ ಭಂಗಿ, ಪಿಡಿದಾಯುದ, ಇವೆಲ್ಲವುಗಳನ್ನು ರೂಪಿಸಿಕೊಂಡ ಮೇಣದ ಬಿಂಬ (Wax Model) ಸಿದ್ಧವಾಗ ಬೇಕು. ಆ ರೀತಿ ಮಾಡುವ ಮುನ್ನ ಸೀಸದ ಕಡ್ಡಿಯಿಂದ ರೇಖಾಣೆ ಚಿತ್ರ (Pencil Sketch) ಮಾಡಿಕೊಂಡು ಸಿದ್ದಗೊಳ್ಳಬೇಕು.

ಮೇಣವನ್ನು ಕರಗಿಸಿ ಉಂಡೆಯಂತೆ ಮಾಡಿಕೊಂಡು ನಂತರ ಮಾಡಬೇಕಾದ ಶಿಲ್ಪಕ್ಕನುಗುಣವಾಗಿ ರೂಪಿಸುತ್ತಾ ಹೋಗಬೇಕು. ಮಣ್ಣಿನ ಮುದ್ದೆಯಿಂದ ಬೇಕಾದ ಮಡಿಕೆ ಮತ್ತಿತರ ಕರಕುಶಲ ವಸ್ತು ಮಾಡುವುದಿಲ್ಲವೇ ಹಾಗೆ. ಅದನ್ನು ರೂಪಿಸುವ ಸಂದರ್ಭದಲ್ಲಿ ನಾವು ಉಪಯೋಗಿಸುವ ಸಾಧನ (Tool) ಮರದಲ್ಲಿ ಮಾಡಿದವು. ಕಬ್ಬಿಣ ಅಥವಾ ಬೇರಾವ ಲೋಹದಲ್ಲಿ ಮಾಡಿಕೊಂಡರು ಅದು

ಅಂಟಿಕೊಳ್ಳುತ್ತದೆಯಾದ್ದರಿಂದ ಬಿದುರು, ಫೈಬರ್, ರೋಸ್‌ವುಡ್, ಸ್ಯಾಂಡಲ್‌ವುಡ್, ಮುಂತಾದವುಗಳಿಂದ ಸಾದನಗಳನ್ನು ಮಾಡಿಕೊಂಡು ಅನಾವಶ್ಯಕ ಭಾಗ (Wastage) ತೆಗೆಯುತ್ತಾ ಹೋಗಬೇಕು.

ನೀರಿನಲ್ಲಿ ಅಜ್ಜಿಕೊಂಡು ಮೇಣದ ಮೂರ್ತಿಯ ರೂಪವನ್ನು ವಿಂಗಡಿಸುತ್ತಾ ಹೋಗಬೇಕು. ಹೀಗೇಕೆ ಅಂದರೇ ನೀವು ಹಲಸಿನ ಹಣ್ಣನ್ನು ಬಿಡಿಸುವಾಗ ಕೈಗೆ ಮತ್ತು ಚಾಕುವಿಗೆ ಸ್ವಲ್ಪ ಎಣ್ಣೆ ಸವರುವುದರಿಂದ ಸರಾಗವಾಗಿ ನಮಗೆ ಬೇಕಾದ ಹಾಗೆ ಕತ್ತರಿಸಿ ತೆಗೆಯ ಬಹುದಲ್ಲವೇ ಹಾಗೆ, ಅನ್ನುತ್ತಾರೆ ನೀಲಕಂಠಾಚಾರ್. ಇದೇ ಕ್ರಮವನ್ನು ಟೆರ್ರಾಕೋಟಾ ಶಿಲ್ಪವನ್ನು ಮಾಡುವಾಗಲು ನೀರಿನಿಂದ ಅದ್ದಿದ ಸಾಧನಗಳಿಂದ (Tools) ವಿಂಗಡಿಸಿ ರೂಪ ಕೊಡ ಬೇಕಾಗುತ್ತದೆಂದು ನೆನಪಿಸುತ್ತಾರೆ. ಮೇಣದ ಬಿಂಬ ಯಾವ ರೀತಿಯಲ್ಲಿ ಇರಬೇಕು, ಇದು ಸ್ಥಾನಿಕವೇ (ನಿಂತಿರುವುದು) ದೈನಿಕವೇ (ಕುಳಿತಿರುವುದು) ಶಯನವೇ (ಮಲಗಿರುವುದೆ) ಯಾವ ನಮೂನೆಯ ವಿಗ್ರಹ ಮಾಡಬೇಕೆಂಬುದನ್ನು ಖಚಿತ ಪಡಿಸಿಕೊಂಡಿರಬೇಕು. ಅದನ್ನು ಬಾವಿಸಿಕೊಂಡಂತೆ ಮಾಡಿದ ನಂತರ ದೂರದಲ್ಲಿಟ್ಟು ನೋಡಬೇಕು. ಎದರು ಮುಖದ ಬಿಂಬಕ್ಕಿಂತ ಪಕ್ಕದಿಂದ (side view) ನೋಡಿದಾಗ ಬಿಂಬದಲ್ಲಿ ಏನಾದರೂ ವ್ಯತ್ಯಾಸ ಇದೆಯೇ ಎಂಬುದು ಸ್ಪಷ್ಟವಾಗಿ ಕಾಣುತ್ತದೆ.

ಹಾಗೆ ಹಲವು ಬಾರಿ ನೋಡಿ ಸರಿಪಡಿಸಿ ನಂತರದಲ್ಲಿ ಅವುಗಳಿಗೆ ಬೇಕಾದ ಆಯುಧಗಳು, ಆಭರಣಗಳನ್ನು ಮಾಡುತ್ತಾ ಹೋಗಬೇಕು. ಇದು ಸಹ ಸುಲಭಕ್ರಮ. ಮಣ್ಣಿನಲ್ಲಿ ಮಾಡುವಾಗ ದಾರದಂತೆ ಹೊಸೆದುಕೊಂಡು ನಂತರ ಆಭರಣ-ಗಳೋಪಾದಿಯಲ್ಲಿ ಅಂಟಿಸುವಂತೆ ಮೇಣವನ್ನು ಹಲಗೆ ಮೇಲೋ, ನೆಲದ ಮೇಲೋ ಉಜ್ಜಿ ದಾರದಂತೆ ಮಾಡಿಕೊಂಡು ಆಭರಣಗಳ ರೀತಿ ಅಂಟಿಸುತ್ತಾ ಹೋಗಬೇಕು. ಅಗತ್ಯಕ್ಕೆ ತಕ್ಕಂತೆ ಕುಶರಿ ಕೆಲಸ ಮಾಡಬೇಕು. ಪರಿಪೂರ್ಣ ರೂಪ ಬಂದನಂತರ ದೂರದಲ್ಲಿಟ್ಟುಕೊಂಡು ಪರೀಕ್ಷಿಸಿಕೊಳ್ಳಬೇಕು. ಜೊತೆಗೆ ನಾವು ಮಾಡಬೇಕೆಂದಿರುವ ವಿಗ್ರಹ ತ್ರಿಭಂಗ ಲಕ್ಷಣವೇ, ದ್ವಿಭಂಗಲಕ್ಷಣವೇ, ಕುಳಿತಾಸನ ವಜ್ರಾಸನವೇ, ಸುಖಾಸನವೇ ಅಥವಾ ಇನ್ನಾವುದೇ ಆಸನವೇ ಎಂಬುದನ್ನು ನಿರ್ದರಿಸಿಕೊಂಡು ಖಚಿತ ಪಡಿಸಿಕೊಳ್ಳಬೇಕು. ಸಾಕಷ್ಟು ಶಿಲ್ಪಿಗಳಿಗೆ ದೊಡ್ಡ ದೊಡ್ಡ ಅಳತೆಯ ಪಂಚಲೋಹದ ವಿಗ್ರಹ ಮಾಡುವಾಗ ವ್ಯತ್ಯಾಸಗಳಾಗುತ್ತವೆ. ಕತ್ತು ಉದ್ದ, ತಲೆ ದಪ್ಪ, ಅಥವಾ ಕೈ ಕಾಲು ನೀಳವಾಗಿರುವುದು, ದೇಹದ ದುಂಡುತನ ಅಗತ್ಯಕ್ಕಿಂತ

ಹೆಚ್ಚು ಕಡಿಮೆ ಇರುವುದು ಆಗುತ್ತದೆ. ಅದಕ್ಕೆ ಮುಖ್ಯಕಾರಣ ಮಾನವ ದೈಹಿಕ ರಚನೆ (Anatomy) ಯನ್ನು. ತಾಳಮಾನವನ್ನು ಸರಿಯಾಗಿ ಅಭ್ಯಾಸ ಮಾಡದಿರುವುದು ವಿಗ್ರಹವನ್ನು ಎರಕದ ಮೂಲಕ ಪೂರ್ಣಗೊಳಿಸುವ ಮುನ್ನ ಮೇಣದ ಶಿಲ್ಪ ಸರಿಪಡಿಸಿ ಕೊಂಡರೇ ನಂತರ ವ್ಯತ್ಯಾಸವಾಯಿತೆಂದು ಚಿಂತಿಸುವುದು ತಪ್ಪುತ್ತದೆ ಎನ್ನುತ್ತಾರೆ.

**ಮಣ್ ಮೆತ್ತುವ ವಿದಾನ :** ಪರಿಪೂರ್ಣ ಬಿಂಬವಾದ ನಂತರ ಎರಕ ಹುಯ್ಯುವುದಕ್ಕೆ ಸಿದ್ದತೆ ಮಾಡಿಕೊಳ್ಳ ಬೇಕು. ಲೋಹ ವಿಗ್ರಹ ತಯಾರಿಕೆಯಲ್ಲಿ ಇದು ಎರಡನೆಯ ಕ್ರಮ. ಜರಡಿ ಹಿಡಿದ ದೂಳುಮಣ್ಣನ್ನು ಜೇಡಿಮಣ್ಣಿನೊಡನೆ ಬೆರಸಿ ಹದವಾಗಿ ಕಲಿಸಿ ಸಿದ್ದಪಡಿಸಿಟ್ಟುಕೊಂಡು ಮೇಣದ ಬಿಂಬದ ಮೇಲೆ ಒಂದು ರೂಪಾಯಿ ನಾಣ್ಯದಷ್ಟು ದಪ್ಪವಾಗಿ ಮೆತ್ತಬೇಕು. ಅದು ಒಣಗಿದ ನಂತರ ಎರಡನೇ ಹಂತವಾಗಿ ಗೋಣಿತಾಟಿನ ಪುಡಿಯೊಡನೆ ಜೇಡಿಮಣ್ಣನ್ನು ಕಲಸಿ ಹದ ಮಾಡಿಟ್ಟುಕೊಂಡು ಮೊದಲು ಮೆತ್ತಿದ ಮಣ್ಣಿನ ಮೇಲೆ ಸುಮಾರು ಕಾಲುಂಗಲದಿಂದ ಅರ್ಧ ಅಂಗುಲದವರೆಗೆ ಮೆತ್ತುತ್ತಾ ಹೋಗಬೇಕು. ಗೋಣಿತಾಟಿನ ಬೆರಕೆಯು, ಮಣ್ಣಿನ ಬಿರಕನ್ನು ಬಹುತೇಕ ತಡೆಗಟ್ಟುತ್ತದೆ ಎನ್ನುತ್ತಾರೆ ನೀಲಕಂಠಾಚಾರ್ಯರು. ಇದಕ್ಕಿಂತ ಹಿಂದೆ ಹಾಗೆಯೇ ಮಣ್ಣನ್ನು ಮೆತ್ತಿ ಮಾಡುತ್ತಿದ್ದೆವು. ಅದು ಕೆಲವು ವೇಳೆ ಬಿರುಕು ಬಿಟ್ಟು ಒಡೆದು ಹೋಗುತ್ತಿದ್ದವು ಎಂಬ ಸ್ವಾನುಭವದ ವಿಚಾರವನ್ನು ಹೇಳುತ್ತಾರೆ.

ಎರಡನೇ ಹಂತದಲ್ಲಿ ಮೆತ್ತಿದ ಮಣ್ಣು ಸ್ವಲ್ಪ ಒಣಗಿದ ನಂತರ ಮತ್ತಷ್ಟು ದಪ್ಪನಾಗಿ ಅಂದರೇ ಸುಮಾರು ಒಂದಂಗುಲ ದಪ್ಪಕ್ಕೆ ಮೆತ್ತಬೇಕು. ನಂತರದಲ್ಲಿ ವಿಗ್ರಹದ ಎತ್ತರಕ್ಕೆ ಅನುಗುಣವಾಗಿ ಅದು ಒಡೆದುಕೊಳ್ಳುವ ಅಥವಾ ಮುರಿದುಕೊಳ್ಳುವ ಅವಕಾಶಗಳಿರುವುದರಿಂದ ಅದನ್ನು ತಡೆಗಟ್ಟಲು ಕಬ್ಬಿಣದ ಸರಳುಗಳನ್ನಾಗಲೀ, ಪಟ್ಟಿಗಳನ್ನಾಗಲೀ ಸುತ್ತಲೂ ಸೇರಿಸಿ ವೈರ್‌ನಿಂದ ಕಟ್ಟುತ್ತೇವೆ. ಈ ವೇಳೆಗಾಗಲೇ ಮೇಣದ ಶಿಲ್ಪ ಬಹುತೇಕ ಮಣ್ಣಿನಿಂದ ಮುಚ್ಚಿದಂತೆ ಆಗಿರುತ್ತದೆ. ಕೊನೆಯದಾಗಿ ಈಗಾಗಲೇ ಕಲಿಸಿದ ಮಣ್ಣನ್ನು ಮೆತ್ತಿರುವ ರೀತಿಯಲ್ಲಿಯೇ ದಪ್ಪ ದಪ್ಪನಾಗಿ ಮೆತ್ತುವುದರಿಂದ ಇಡೀ ಮೇಣದ ವಿಗ್ರಹ ಯಾವ ಆಕಾರವು ಕಾಣದೇ ಮಣ್ಣಿನ ಮುದ್ದೆಯಂತಾಗಿರುತ್ತದೆ ಎನ್ನುತ್ತಾರೆ.

ಮೇಣದ ವಿಗ್ರಹದಲ್ಲಿ ಎರಡು ಕೊಳವೆಯಾಕಾರದ ರಂದ್ರವನ್ನು ಈ ಮೊದಲೇ ಮಾಡಿರುತ್ತೇವೆ. ಇದರ ಉದ್ದೇಶ ಕಾಯಿಸಿದಾಗ ಮೇಣ ಹೊರಬರಲು ಸಹಕಾರಿಯಾಗುತ್ತದೆ. ಮಣ್ಣಿನಿಂದ ಮೆತ್ತಿದ ಮೇಣದ ಮೂರ್ತಿಯನ್ನು ಕಾಯಿಸುತ್ತಾ

ಹೋಗಬೇಕು. ಅಂದರೇ ಒಲೆ ಮೇಲಿಟ್ಟು ಕಾಯಿಸುವುದು ಎಂದರ್ಥವಲ್ಲ. ಮಣ್ಣು ಮೆತ್ತಿದ ಮೂರ್ತಿ ತುಂಬಾ ಬೆರಣಿ ಮತ್ತಿತರ ಉರಿಯುವ ಸಾದನಗಳ ಮೂಲಕ ಶಾಖ ಕೊಡುತ್ತಾ ಹೋದಂತೆ, ಆ ಮಣ್ಣಿನ ಮುದ್ದೆಯೊಳಗಿನ ಮೇಣ ಕರಗುತ್ತಾ ಹೋಗುತ್ತದೆ. ಕ್ರಮೇಣ ಅದು ಮೊದಲೇ ಮಾಡಿದ ರಂಧ್ರದ ಮೂಲಕ ಹೊರಹೋಗಲು ಆರಂಬಿಸುತ್ತದೆ. ಹಾಗೆ ಪೂರ್ಣವಾಗಿ ಹೊರಬಂದನಂತರ ಉಳಿಯುವುದೇ ವಿಗ್ರಹದಾಕಾರದ ಒಳ ಆವರಣ ಮಾತ್ರ, ಮೆಲ್ಪದಿಕೆ ಮಾತ್ರ ಮಣ್ಣಿನಿಂದ ಆವೃತವಾಗಿರುತ್ತದೆ.

**ಎರಕದ ಮುಖ್ಯ ಘಟ್ಟ :** ಮುದ್ದೆಯಾಕಾರದ ಆ ಮಣ್ಣಿನ ಮೂರ್ತಿಯ ಒಳ ಆವರಣಕ್ಕೆ ಕುದಿಯುತ್ತಿರುವ ದ್ರಾವಣವಾದ ತಾಮ್ರ, ಹಿತ್ತಾಳೆ, ಬೆಳ್ಳಿ, ಮುಂತಾದ ಅವಶ್ಯವೆನಿಸಿದ ಲೋಹದ್ರಾವಣವನ್ನು ಹುಯ್ಯಬೇಕು. ಅದು ಅಷ್ಟು ಸುಲಭದ ಕ್ರಮವಲ್ಲವೆನ್ನುತ್ತಾರೆ. ಮಣ್ಣಿನ ಆ ಬಿಂಬ ಕೆಲವು ವೇಳೆ ಅತಿಯಾದ ಶಾಖದಿಂದ ಒಡೆದು ಹೋಗುವ ಸಾದ್ಯತೆ ಇರುವುದರಿಂದ ಅದನ್ನು ನೆಲದಲ್ಲಿ ಗುಂಡಿಮಾಡಿ ತಲೆಕೆಳಕಾಗಿ ಹೂಳಬೇಕು. ಹಾಗೆ ಮಾಡುವಾಗಲೂ ಮತ್ತೊಂದು ಎಚ್ಚರ ವಹಿಸುವ ಅಂಶ, ಎರಕಹುಯ್ಯುವುದಕ್ಕನುಗುಣವಾಗುವಂತೆ ಭೂಮಿಮಟ್ಟದಿಂದ ಒಂದು ಅರ್ಧ ಅಡಿ ಎತ್ತರದಲ್ಲಿ ಮಾತ್ರ ಇರಬೇಕು. ಹೀಗೆ ಮಾಡಿ ಕಾಯುತ್ತಿರುವ ದ್ರಾವಣವನ್ನು ಹಾಕುತ್ತಾ ಹೋಗುವುದರಿಂದ ನಿಧಾನವಾಗಿ ಹಂತ ಹಂತವಾಗಿ ಒಳ ಆವರಣದ ಉಬ್ಬಿದ, ಕುಗ್ಗಿದ, ತಗ್ಗಿದ ಬಾಗಗಳೆನಿಸಿದ ಕೈ, ಕಾಲು, ಆಭರಣಗಳಂತಹ ಕಿರಿದಾದ ಭಾಗಗಳಲ್ಲಿ ಇಳಿಯುತ್ತಾ ಹೋಗುತ್ತದೆ. ಈ ಸಂದರ್ಭದಲ್ಲಿ ಅವಸರ ಸಲ್ಲದು. ಇಳಿದಂತೆ ನೋಡಿಕೊಂಡು ದ್ರಾವಣವನ್ನು ಹುಯ್ಯುತ್ತಾ ಹೋಗಬೇಕು. ಒಂದುವೇಳೆ ಒಮ್ಮೆ ದ್ರಾವಣವನ್ನು ಸ್ವಲ್ಪ ಪ್ರಮಾಣದಲ್ಲಿ ಹಾಕಿ ಇಳಿಯಲಿ ಎಂದು ಬಿಟ್ಟು ಕೆಲ ಕಾಲನಂತರ ಮತ್ತೆ ಹಾಕಲು ಹೊರಟರೇ ಅದರ ಶಾಖದ ಪ್ರಮಾಣ ಇಳಿಮುಖವಾಗಿ ಮೊದಲು ಹಾಕಿದುದಕ್ಕೂ ನಂತರ ಹಾಕಿದ ದ್ರಾವಣಕ್ಕು ಹೊಂದಾಣಿಕೆ ಆಗದೇ ಹೋಗುವ ಸಂದರ್ಭಗಳು ಉಂಟು. ಹಾಗಾಗದಂತೆ ಎಚ್ಚರ ವಹಿಸುವುದು ಅಗತ್ಯ ಎನ್ನುತ್ತಾರೆ. ಈ ಕ್ರಮವನ್ನು ಅನುಸರಿಸುವಲ್ಲಿಯೂ ಸಹ ಒಬ್ಬೊಬ್ಬರದು ಒಂದೊಂದು ತೆರನಾದ ಅನುಭವ ಇರುತ್ತದೆ. ಅದು ಅವರು ಕಲಿತು ಬಂದ ಕ್ರಮವನ್ನು ಅನುಸರಿಸುತ್ತದೆ.

ಹೀಗೆ ಪೂರ್ಣ ಪ್ರಮಾಣದಲ್ಲಿ ಎರಕ ಹುಯಿದ ನಂತರ ಅದನ್ನು ಆರಲು ಕೆಲಗಂಟೆಗಳ ಕಾಲವಾದರು ಬಿಡಬೇಕು. ಆ ಸಂದರ್ಭದಲ್ಲಿ ಎಂತಹ ಅನುಭವಿ

ಲ್ಪಿಗಾದರೂ ನಾ ಮಾಡಿದ ಶಿಲ್ಪ ಸರಿಯಾಗಿ ಬಂತೋ ಇಲ್ಲವೋ ಎಂಬ ತವಕವಿರುತ್ತದೆ. ಏನಾದರೂ ಹೆಚ್ಚು ಕಮ್ಮಿ ಆಗಿದ್ದರೇ ಏನು ಮಾಡುವುದು ಎಂಬ ಆತುರ ಕಾಡುತ್ತಿರುತ್ತದೆ. ಆದರೂ ಸಹ ತಾಳ್ಮೆಯಿಂದ ಇದ್ದು ಅದು ಗಟ್ಟಿಗೊಂಡು ಪದವಾಗಿದೆಯೆಂಬ ಭಾವನೆಯಿಂದ ನೆಲದಲ್ಲಿ ಹೂಳಿದ್ದುದನ್ನು ತೆಗೆದು ಮಣ್ಣನ್ನು ಬಿಡಿಸಿ ನೀರಿನಿಂದ ಸ್ವಚ್ಛಗೊಳಿಸಬೇಕು.

**ಎರಕದ ಮೂರ್ತಿಗೆ ಚಿತ್ತಾರದ ಚೆಲವು** : ಎರಕಗೊಂಡ ವಿಗ್ರಹದಲ್ಲಿ ಕೆಲವು ವೇಳೆ ಕೆಲವು ವ್ಯತ್ಯಾಸಗಳಾಗುವ ಸಾದ್ಯತೆ ಉಂಟು. ಎರಕದ ದ್ರಾವಣ ಗರಿಷ್ಟ ಪ್ರಮಾಣದಲ್ಲಿ ಹೋಗಿ ಅವಶ್ಯಕತೆ ಇರುವುದಕ್ಕಿಂತ ದಪ್ಪನಾಗಿರಬಹುದು. ಅಥವಾ ಅವಶ್ಯಕತೆಗಿಂತ ಕಡಿಮೆ ಆಗಿ ಆ ಚಿತ್ರದ ಭಾಗ ಕುಬ್ಜವಾಗಿರಬಹುದು. ಅದನ್ನು ಸರಿಪಡಿಸುವ ಕಲೆಗಾರಿಕೆ, ಆಯಾಯ ಶಿಲ್ಪಿಯನ್ನೇ ಅನುಸರಿಸಿರುತ್ತದೆ. ಸಾಮಾನ್ಯವಾಗಿ ಕೈಬೆರಳಾಗಲೀ, ಕಾಲ್ಬೆರಳಾಗಲೀ ಆಯುಧಗಳಲ್ಲಾಗಲೀ, ಸಂದುಗಳು ಕಾಣಿಸದಂತೆ ಎರಕವಾಗಿರುತ್ತದೆ. ಅವುಗಳನ್ನು ಗುರ್ತಿಸಿ, ನಾವು ನಿರೀಕ್ಷಿಸುವ ಮಟ್ಟಕ್ಕೆ ಬರುವಂತಾಗಲು ವಿವಿಧ ರೀತಿಯ ಅರಗಳನ್ನು ಬಳಸಿ ಉಜ್ಜಬೇಕು. ಅವಶ್ಯವಿದ್ದಲ್ಲಿ ಹೆಚ್ಚಿನ ಪ್ರಮಾಣವನ್ನು ಉಳಿಯಿಂದ (chisel) ಕೆತ್ತಿ ತೆಗೆಯಬಹುದು.

ಎರಕಗೊಂಡ ಶಿಲ್ಪಕ್ಕೆ ಮೆರಗು ನೀಡುವುದು, ಬೆಲೆಬರುವುದು, ಅದರ ನಕಾಶೆ ಕೆಲಸದಿಂದ, ಕೈ, ಕಾಲು ಆಭರಣಗಳು, ಎದೆಕಟ್ಟು, ಕೊರಳಾಭರಣ, ಕಿರೀಟ, ನಡುಪಟ್ಟಿ ಧರಿಸಿದ ವಿವಿದ ವಸ್ತ್ರಗಳು, ಇತ್ಯಾದಿಗಳನ್ನೇ ಅಗತ್ಯಕ್ಕನುಗುಣವಾಗಿ ಸಣ್ಣ ಸಣ್ಣ ಮೊಳೆಗಳಿಂದ ಒಡೆದು ವಿನ್ಯಾಸ ಗೊಳಿಸುತ್ತಾ ಹೋಗಬೇಕು. ಇದು ಎರಕ ಮಾಡುವುದಕ್ಕೆ ಹಿಡಿಯುವ ಸಮಯಕ್ಕಿಂತ ಹೆಚ್ಚಿನ ಸಮಯ ಹಿಡಿಯುತ್ತದೆನ್ನುತ್ತಾರೆ.

ಶಿಲಾ ಶಿಲ್ಪವೇ ಆಗಲೀ, ಲೋಹಶಿಲ್ಪವೇ ಆಗಲೀ ಕುಶರಿ ಕೆಲಸದಿಂದ ಆ ವಿಗ್ರಹಕ್ಕೆ ಒಂದು ಘನತೆ ಮತ್ತು ಆಕರ್ಷಣೆ ಬರುತ್ತದೆ. ಅದನ್ನು ಆಯಾಯ ವಿಗ್ರಹಕ್ಕನುಗುಣವಾಗಿ ಮಾಡುವ ಚಾಕ ಚಕ್ಯತೆ ಶಿಲ್ಪಿಯಾದವನಿಗೆ ಇದ್ದರೆ ಮಾತ್ರ ಅವನು ಯಶಸ್ಸು ಕಾಣಲು ಸಾದ್ಯ ಎಂದು, ಶಿಲ್ಪ ರಚನೆಯಲ್ಲಾಗುವ ಆಂತರಿಕ ತೊಂದರೆಗಳನ್ನು ಮನಬಿಚ್ಚಿ ಹೇಳುತ್ತಾರೆ ನೀಲಕಂಠಾಚಾರ್ ಅವರು.

ಆಳೆತ್ತರದ ಲೋಹ ಶಿಲ್ಪಮಾಡುವಾಗ ಪೂರ್ಣ ವಿಗ್ರಹವನ್ನು ಎರಕದಿಂದ ಮಾಡುವುದಿಲ್ಲ. ಬದಲಾಗಿ ಕೈ, ಕಾಲು, ತಲೆ ಬೇರೆ ಬೇರೆ ಭಾಗ ಮಾಡಿಕೊಂಡು

ನಂತರ ಬೆಸುಗೆ (Soldering) ಹಾಕುವ ಮೂಲಕ ಜೋಡಿಸುತ್ತಾರೆನ್ನುತ್ತಾರೆ. ಎದೆ ಮೊಗದ ಶಿಲ್ಪವೊಂದರಲ್ಲಿ ತಲೆಯ ಮುಂಬಾಗ ಮತ್ತು ಹಿಂಬಾಗ ಹಾಗೆಯೇ ಎದೆಯ ಮುಂಬಾಗ, ಹಿಂಭಾಗಗಳನ್ನು ನಾಲ್ಕು ಭಾಗವನ್ನಾಗಿ Hallow casting method ಮಾಡಿ ನಂತರ ಬೆಸುಗೆಯ ಮೂಲಕ ಜೋಡಿಸಿ ಬೆಂಗಳೂರಿನ ಲಕ್ಷ್ಮೀ ದೇವಾಲಯವೊಂದಕ್ಕೆ ಮಾಡಿಕೊಟ್ಟ ಶಿಲ್ಪದ ನೆನಪನ್ನು ಸ್ಮರಿಸುತ್ತಾರೆ.

**ಪಾಲಿಸ್ ಕ್ರಮ :** ಹಿತ್ತಾಳೆ, ತಾಮ್ರ, ಚಿನ್ನ, ಬೆಳ್ಳಿ ಯಾವುದೇ ವಿಗ್ರಹ ಮಾಡಿದರೂ ನಯಗಾರಿಕೆ (Nice finishing) ಅತ್ಯಾವಶ್ಯಕ. ಅದನ್ನು ಕೈಯಿಂದಲೇ ಮಾಡಬೇಕು. ಉಪ್ಪುಕಾಗದದಿಂದ (Emerey) ಉಜ್ಜುವುದರಿಂದ ಬರುವುದಿಲ್ಲ. ಅರದಿಂದ ಉಜ್ಜಿಯೇ ಅದಕ್ಕೆ ನಯವನ್ನು ತರಬೇಕು. ಅರಗಳಲ್ಲಿಯೂ ನಾನಾ ನಮೂನೆಗಳುಂಟು.

ಒರಟು ಹಲ್ಲು (Rough teeth) ಮತ್ತು ನಯವಾದ ಹಲ್ಲು (Smooth teeth) ಎರಡು ಭಾಗ ಉಂಟು. ಅದರಲ್ಲಿ ಚಪ್ಪಟೆ (Flat), ವೃತ್ತಾಕಾರ (Round), ಅರೆವೃತ್ತಾಕಾರ (Half Round) ಮತ್ತು ತ್ರಿಕೋನಾಕಾರ (Triangle) ಹೀಗೆ ನಾನಾ ನಮೂನೆಗಳುಂಟು. ಈ ಅರಗಳನ್ನು ಸಂದರ್ಭಾನುಸಾರ ಆಯಾಯ ವಿಗ್ರಹಕ್ಕನು ಗುಣವಾಗಿ ಉಪಯೋಗಿಸಬೇಕಾಗುತ್ತದೆ. ವಿಗ್ರಹ ಅಥವಾ ಪ್ರಭಾವಳಿ ಪೂರ್ಣಗೊಂಡ ನಂತರ ಅವುಗಳ ಮೇಲಿರುವ ದೂಳನ್ನು ಸ್ವಚ್ಛ ಬಟ್ಟೆಯಿಂದಾಗಲೀ, ಅಥವಾ ಬ್ರಸ್‌ನಿಂದಾಗಲೀ, ಜಾಡಿಸಿ ಅದರ ಮೇಲೆ ನೈಟ್ರಿಕ್ ಆಸಿಡನ್ನು ಹಾಕಬೇಕು. ಅದು, ಮೈ, ಕೈಗೆ ತಗುಲಿದರೇ ಸುಟ್ಟು ಹೋಗುವ ಸಂದರ್ಭಗಳುಂಟು. ಅದಕ್ಕಾಗಿಯೇ ಮರದ ಕಡ್ಡಿಗೊಂದು ಬಟ್ಟೆ ಸುತ್ತಿಕೊಂಡು ಅದರ ಮೂಲಕ ಹಚ್ಚಬೇಕು. ಕೆಲ ನಿಮಿಷದ ನಂತರ ಹುಣಸೆ ಹುಳಿಯನ್ನು ಅದರ ಮೇಲೆ ಹುಯ್ಯಬೇಕು. ತಡಮಾಡಬಾರದು.

ಗಂಟೆಗಟ್ಟಲೇ ಆಸಿಡ್ ಹಚ್ಚಿ ಬಿಟ್ಟರೇ ಅದು ಕಪ್ಪಾಗುವ ಸಾಧ್ಯತೆಹೆಚ್ಚು. ಅದಕ್ಕಾಗಿಯೇ ಹುಣಸೆ ಹಣ್ಣನ್ನು ನೀರಿನಲ್ಲಿ ನೆನೆಹಾಕಿ ಅದರ ರಸದ ದ್ರಾವಣ ಸಿದ್ದವಾಗಿಟ್ಟು ಕೊಳ್ಳಬೇಕು. ಹೀಗೆ ಹುಣಸೆ ರಸದಿಂದ ವಿಗ್ರಹ ಹೊಳಪು ಬರಲು ಆರಂಬಿಸುತ್ತದೆ. ಕ್ರಮೇಣ ಶುದ್ಧವಾದ ನೀರಿನಲ್ಲಿ ತೊಳೆದು ನಂತರ ಅಂಟುವಾಳದ ಕಾಯಿ ಕುಟ್ಟಿ ಪುಡಿ ಮಾಡಿಕೊಂಡಿದ್ದ ದ್ರಾವಣವನ್ನು ವಿಗ್ರಹದ ಮೇಲಾಕಿ ಹಿತ್ತಾಳೆಯ ವೈರ್ ಬ್ರಸ್‌ನಿಂದ ಚೆನ್ನಾಗಿ ತೊಳೆಯಬೇಕು. ನೊರೆ ಬರುತ್ತಾಹೋಗುತ್ತದೆ. ಹೀಗೆ ಅನೇಕ ಬಾರಿ ಮಾಡುವುದರಿಂದ ಮೇಲಿಂದ ಮೇಲೆ ಶುದ್ಧ ನೀರಿನಿಂದ ತೊಳೆಯುವುದರಿಂದ ವಿಗ್ರಹಕ್ಕೆ

ೊಳಪು ಬರುತ್ತಾ ಹೋಗುತ್ತದೆ. ಆಭರಣಗಳನ್ನು ಸಹ ಅಂಟುವಾಳದ ಕಾಯಿಯ
್ರಾವಣದಿಂದಲೇ ತೊಳೆಯುತ್ತಾರೆ. ಈ ದ್ರಾವಣ ಅಂಗಾಂಗಗಳಿಗೆ ತಗುಲಿದರೇ
ಾವ ಹಾನಿಯು ಆಗುವುದಿಲ್ಲವೆನ್ನುತ್ತಾರೆ.

**ಬೆಸುಗೆಯ ವಿಧಾನ :** ಸಾಮಾನ್ಯವಾಗಿ ಬೆಳ್ಳಿಯ ಮಂಟಪ ಆಗಬೇಕೆಂದು
ನ ಬರುತ್ತಾರೆ. ಅತ್ಯಂತ ಕಿರುಮಂಟಪವಾದರೇ ಬೆಳ್ಳಿಯ ಎರಕ ಹುಯ್ಯುವ ಮೂಲಕ
ಟ್ಟಿಯಾದ ಮಂಟಪ ಮಾಡಬಹುದು. ಆದರೇ ಆರೀತಿ ಬಯಸುವವರು ಅತ್ಯಂತ
ಿಮೆ. ಮರದಿಂದ ಮಾಡಿದ ಮಂಟಪಕ್ಕೆ ಬೆಳ್ಳಿಯ ರೇಖಿನ ಹೊದಿಕೆ ಮಾಡುವ
ಧಾನವೇ ಅಧಿಕ. ಬೆಳ್ಳಿಯ ರೇಖು ಕಬ್ಬಿಣದ ತಗಡಿನ ರೀತಿ ಬೇಕಾದ ಅಳತೆಗೆ
ಗುವುದಿಲ್ಲ. ಸೀಮಿತ ಅಳತೆಯಲ್ಲಿ ಸಿಗುವ ರೇಖನ್ನು ತಂದು ಅದನ್ನು ಆಕಾರಕ್ಕೆ
ಕ್ಕಂತೆ ಮಾಡಿ ಬೆಸೆಯುವುದೊಂದೇ ಮಾರ್ಗ.

ಹಾಗೆ ಬೆಸೆಯುವಾಗಲು ಎರಡು ಕ್ರಮವಿದೆ. ಒಂದು ಹಿತ್ತಾಳೆ ಮತ್ತು ಬೆಳ್ಳಿಯ
ಮಿಶ್ರಣವನ್ನು ಉಪಯೋಗಿಸಿ ಮಾಡುವ ಬೆಸುಗೆ, ಮತ್ತೊಂದು ಸತು (Zinc)
ಮತ್ತು ಬೆಳ್ಳಿಯ ಮಿಶ್ರಣವನ್ನು ಉಪಯೋಗಿಸಿ ಮಾಡುವ ಕ್ರಮ.

ಮೊದಲಿನ ಕ್ರಮವಾದ ಹಿತ್ತಾಳೆ ಮತ್ತು ಬೆಳ್ಳಿಯ ಮಿಶ್ರಣದಲ್ಲಿ ಬೆಸುಗೆ
ಮಾಡುವಾಗ ಹಿತ್ತಾಳೆಯ ಬಣ್ಣ ಎದ್ದು ಕಾಣುತ್ತದೆ. ಆದರೆ ಸತು ಮತ್ತು ಬೆಳ್ಳಿ
ಮಿಶ್ರಣದ ಬೆಸುಗೆಯಲ್ಲಿ ಸತು ಆವಿಯಾಗಿ ಹೋಗುವುದರಿಂದ ಬೆಳ್ಳಿಯಷ್ಟೆ ಪ್ರದಾನವಾಗಿ
ೋಚರಿಸುವುದರಿಂದ ಬೆಸುಗೆ ಹಾಕಿದ ಭಾಗದಲ್ಲಿ ಎದ್ದು ಕಾಣುವುದಿಲ್ಲ. ನಾವು
ಯಾವ ಯಾವ ಲೋಹದಲ್ಲಿ ಮಾಡುತ್ತೇವೆ ಅದರ ಬಣ್ಣಕ್ಕೆ ಅನುಗುಣವಾಗಿ ಬೆಸುಗೆ
ಪದಾರ್ಥಗಳನ್ನು ಬಳಸಿಕೊಳ್ಳಬೇಕು.

ಬೆಸುಗೆಗೆ ಬೇಕಾದ ಪದಾರ್ಥ ಮಾಡಿಕೊಳ್ಳುವಲ್ಲಿಯು (Soldering Material)
ಸಹ ಒಂದು ಕ್ರಮವಿದೆ ಒಂದು ಭಾಗ ಹಿತ್ತಾಳೆ ಎರಡು ಭಾಗ ಬೆಳ್ಳಿ ತೆಗೆದುಕೊಂಡು
ಅದನ್ನು ಕರಗಿಸಿ ಗಟ್ಟಿ ಮಾಡಿಕೊಳ್ಳಬೇಕು. ಯಾವುದು ಹೆಚ್ಚಾದರೂ ಹೊಂದಾಣಿಕೆ
ಯಾಗುವುದಿಲ್ಲ. ಬೆಸೆಯಲು ಯೋಗ್ಯವಾಗುವುದಿಲ್ಲ. ಹದವರಿತು ಅದನ್ನು ಕರಗಿಸಿ
ಗಟ್ಟಿಯಾಗಿ ಮಾಡಿದ ನಂತರ ಅದನ್ನು ಪಟ್ಟಿಯಂತೆ ಅಥವಾ ಸರಳಿನಂತೆ ಮಾಡಿಕೊಂಡು
ಬೆಸೆಯಲು ಉಪಯೋಗಿಸಬೇಕು.

ಈಗಂತೂ ಅತ್ಯಂತ ಸುಲಭಕ್ರಮ ಆಗಿದೆ. ಬೆಳ್ಳಿ, ಹಿತ್ತಾಳೆ, ಕರಗಿಸಿದ ಗಟ್ಟಿಯನ್ನು

ಕೊಟ್ಟರೇ ಯಂತ್ರದ ಮೂಲಕ ಸಣ್ಣ ಸಣ್ಣ ರೇಖುಗಳನ್ನಾಗಿ ಮಾಡಿ ಕೊಡುತ್ತಾರೆ. ಅದನ್ನು ನಮ್ಮ ಅನುಕೂಲಕ್ಕೆ ತಕ್ಕಂತೆ ಕತ್ತರಿಸಿಕೊಂಡು ಬೆಸುಗೆ ಹಾಕಲು ಉಪಯೋಗಿಸ ಬಹುದೆಂದು ಲೋಹ ಶಿಲ್ಪದ ರಚನಾ ವಿಧಾನವನ್ನು ಸ್ಪಷ್ಟ ಮಾತುಗಳಿಂದ ಹೇಳುತ್ತಾರೆ ನೀಲಕಂಠಾಚಾರ್ ಅವರು. ಕೊನೆಯ ಹಂತವಾದ ಪಾಲಿಸ್ ಮಾಡುವ ಮೂಲಕ ವಿಗ್ರಹ ನಯನ ಮನೋಹರಗೊಳ್ಳುತ್ತಾ ಹೋಗುತ್ತದೆ.

**ಮುಖ ಚಿತ್ರರಚನೆ :** ಯಾವುದೇ ವ್ಯಕ್ತಿಯ ನಿರ್ದಿಷ್ಟರೂಪವನ್ನು ಮಾಡಬೇಕಾದ ಸಂದರ್ಭದಲ್ಲಿ ವ್ಯತ್ಯಾಸವಾಗುವುದುಂಟು. ಕಾರಣ ಆ ಶಿಲ್ಪಿಗೆ ಅನುಭವದ ಕೊರತೆ ಎಂಬುದು ಅದರಿಂದ ಸಾಬಿತಾಗುತ್ತದೆ ಎನ್ನುತ್ತಾರೆ. ಹಲವಾರು ವರ್ಷಗಳ ಅನುಭವದಿಂದ ಮಾತ್ರ ಮಾಡಲು ಸಾದ್ಯ. ಚಿತ್ರಕಲೆಯಲ್ಲೇ ತೆಗೆದುಕೊಳ್ಳಿ. ಎಷ್ಟು ಜನ ರೂಪಚಿತ್ರವನ್ನು ಯತಾವತ್ತಾಗಿ ಮಾಡಬಲ್ಲರು. ವಿದ್ಯಾಭ್ಯಾಸದ ಸಂದರ್ಭದಲ್ಲಿ ನಾಲ್ಕಾರು ಚಿತ್ರಮಾಡಿ ಪರೀಕ್ಷಕರಿಗೆ ದಾಖಲಿಸುವುದನ್ನು ಬಿಟ್ಟರೇ ನಂತರದಲ್ಲಿ ಮಾಡಲು ಹೋಗುವುದಿಲ್ಲ. ಹಾಗಾಗಿ ಮುಖಚಿತ್ರರಚನೆ (Portrait) ಬಹಳಷ್ಟು ಕಲಾವಿದರಿಗೆ ಕೈಗೂಡದ ಕಲೆಯಾಗುತ್ತದೆ. ಆದರೇ ನಿರ್ಧಿಷ್ಟ ರೂಪ, ಆಕಾರ, ಬಣ್ಣಗಳಲ್ಲಿ ಭಾವನೆಯೇ ಮುಖ್ಯವೆನಿಸಿದ ಕಲೆಯ ಇತರ ಪ್ರಕಾರಗಳಿಗೆ ಈ ಕಷ್ಟವೆನಿಸುವುದಿಲ್ಲ. ಹಾಗೆಯೇ ರೂಪವನ್ನು ಶಿಲೆಯಿಂದ ಕಡೆಯುವವರಿಗೆ, ಎರಕದಿಂದ ಮಾಡುವ ಲೋಹಶಿಲ್ಪಿಗಳಿಗೆ, ಅಥವಾ ಪ್ಲಾಸ್ಟರ್ ಆಫ್ ಪ್ಯಾರಿಸ್‌ನಿಂದ ಮಾಡುವ ರೂಪಶಿಲ್ಪಿಗೆ ಅಗಾಧವಾದ ಅನುಭವ ಅಗತ್ಯವಾಗಿರುತ್ತದೆ. ಬರಿಯ ಪುಸ್ತಕ ಓದಿನಿಂದಾಗಲೀ, ನೋಡುವುದ ರಿಂದಾಗಲೀ ಬರುವಂತಹದಲ್ಲ. ಸ್ವಾನುಭವ, ಅತ್ಯಾವಶ್ಯಕವಾಗಿ ಬೇಕು. ರೂಪಶಿಲ್ಪ ಹೊರತುಪಡಿಸಿ ದೇವತಾಮೂರ್ತಿಯ ಶಿಲ್ಪವನ್ನು ಮಾಡುವವರು ನಮ್ಮಲ್ಲಿ ಸಾಕಷ್ಟು ಇದ್ದಾರೆ. ಕಾರಣ ಯಾವುದೇ ದೇವತಾಮೂರ್ತಿಯ ಶಿಲ್ಪಕ್ಕೆ ಮುಖ ಹೀಗೆ ಇರಬೇಕು ಎಂಬುದಿಲ್ಲ. ಅದರ ಸಾಮಾನ್ಯ ಲಕ್ಷಣಗಳಾದ, ವಿಭೂತಿ, ನಾಮ, ಕುಂಕುಮ, ಜಟೆ, ಜಡೆ, ಮುಕುಟ, ಆಭರಣ, ಇತ್ಯಾದಿ ಲಕ್ಷಣಗಳನ್ನು ಯಾವುದಾದರು ಮುಖಕ್ಕೆ ಹೋಲಿಸಿ ಶಿಲ್ಪವನ್ನು ಮಾಡ ಬಹುದು.

**ಶಿಲಾಟಂಕ :** ಬಿಡಿ ಬಿಡಿಯಾಗಿ ಮಾಡಿಕೊಂಡು ಭಾಗಗಳನ್ನು ಕೂಡಿಸುವುದಕ್ಕೆ ಉಪಯೋಗಿಸುವ ಮಾಧ್ಯಮವಿದು. ಶುದ್ಧವಾದ ಅರಗನ್ನು (Pure) ಕರಗಿಸಿ, ಜೊತೆಗೆ ಸೀಸವನ್ನು ಪ್ರತ್ಯೇಕ ಕರಗಿಸಿ ಮಿಶ್ರಣ ಮಾಡಿ ತಯಾರು ಮಾಡಿಕೊಳ್ಳ ಬೇಕು. ಇದು ಹದವರಿತು ಆಗಬೇಕಾದ ಕೆಲಸ. ಇಲ್ಲವಾದಲ್ಲಿ ಒಡೆದು ಹೋಗುವ



ಶ್ರೀಲಕ್ಷ್ಮಿ



ಲಕ್ಷ್ಮಿ



ಶ್ರೀ ಪಂಚಾಸ್ಯ ವಿರಾಜಿತಂ
ತದುದಯ ತತ್ಪಂಚ ವೇದ ಪ್ರಭುಮ್

ಪಂಚಬ್ರಹ್ಮ ನಿದಾನ ಮಾದ್ಯಮಲಂ
ತದ್ವಿಶ್ವಕರ್ಮಾತ್ಮಕಮ್

ಶುದ್ಧ ಬ್ರಹ್ಮ ಸಮಪ್ರಪಂಚಕ ಜನಿಸ್ಥಿತ್ಯಂತ
ಹೇತುಂ ವಿಭುಮ್

ಸ್ವಾಂತೇ ವಿತ್ಯ ಮುಪಾಸ್ಮಹೇತಿ ಸಕಲಾಭಿಷ್ಟಾರ್ಥ
ಸಂಸಿದ್ಧಯೇ

ಸಂಗ್ರಹ - ಎಲ್. ಶಿವಲಿಂಗಪ್ಪ



ಶ್ರೀ ವೇಣುಗೋಪಾಲ-ರಾಷ್ಟ್ರ ಪ್ರಶಸ್ತಿ ಪಡೆದ ಶಿಲ್ಪ

ಅಂಬೆಗಾಲು ಕೃಷ್ಣ-ಬೆಳ್ಳಿ

ಅವಕಾಶಗಳುಂಟು. ಸೀಸದ ದ್ರಾವಣ ಜಾಸ್ತಿ ಆದರೂ ಅಥವಾ ಕಡಿಮೆ ಆದರೂ ಅಂಟು ಬರುವುದಿಲ್ಲ. ಹೆಚ್ಚಿನ ಶಕ್ತಿ ಇರುವುದಿಲ್ಲ. ಸಾಕಷ್ಟು ಶಿಲ್ಪಿಗಳಿಗೆ ಈ ಮಾಗಿದ ಅನುಭವದ ಕೊರತೆಯಿಂದಾಗಿ ಅನೇಕ ಶಿಲಾ ಶಿಲ್ಪಿಗಳು ಕೈ ಮುರಿದಂತೆ, ಹಿಡಿದ ಆಯುಧಗಳು ಕಳಚಿಬಿದ್ದಂತೆ ಕಾಣುವ ಶಿಲ್ಪಗಳಲ್ಲಿ ಚೌಕಾಕಾರದ ಹಳ್ಳಗಳಿರುತ್ತವೆ. ಆ ಹಳ್ಳಗಳಿಗೆ ಸೂಕ್ತವಾದ ಕಲ್ಲಿನ, ಅಥವಾ ಕಬ್ಬಿಣದ ಜೋಡಣಾ ತುಂಡು ಅಳವಡಿಸಿ ಶಿಲಾಟಂಕ ಹಾಕಿರುತ್ತಾರಾದರೂ ಮಿಶ್ರಣದ ದೋಷದ ಕಾರಣ ಹೆಚ್ಚು ತಾಳಿಕೆ ಬಾಳಿಕೆ ಬರುವುದಿಲ್ಲ. ಈಗಂತೂ ಅಂಟಿಸುವ (Adhesive) ಅನೇಕ ಮಾಧ್ಯಮಗಳು ಬಂದಿವೆ. ಹಿಂದಿನ ಕಷ್ಟಸಾಧ್ಯವಾದ ಕೆಲಸಗಳು ಈಗಿಲ್ಲವೆಂಬುದು ಸಮಾಧಾನಕರ ಅಂಶ.

**ಪ್ರಭಾವಳಿ** : ವಿಗ್ರಹಗಳ ಹಿಂದೆ ಅಲಂಕಾರಕ್ಕಾಗಿ ಕಮಾನಿನಾಕಾರದಲ್ಲಿ ಮಾಡಿರುವುದಕ್ಕೆ- ಪ್ರಭಾವಳಿ ಅನ್ನುತ್ತಾರೆ. ಅಚಲ ಮೂರ್ತಿಗಳೆಂದೆನಿಸಿದ ಕಲ್ಲಿನಲ್ಲಿ ಮಾಡಿದ ಶಿಲ್ಪಗಳಲ್ಲಿಯೂ ಸಹ ಪ್ರಭಾವಳಿ ಇರುತ್ತದೆ. ಅದು ಸ್ಥಾನಿಕ(ನಿಂತಿರುವ) ಮೂರ್ತಿಯಾಗಿರಬಹುದು ಅಥವಾ ಕುಳಿತ ಮೂರ್ತಿಯಾಗಿರಬಹುದು ಅವುಗಳ ಹಿಂದೆ ಪ್ರಭಾವಳಿ ಇದ್ದರೇ ಸೊಗಸು. ವಿಗ್ರಹಕ್ಕೆ ಒಂದು ಪರಿ ಪೂರ್ಣತೆ ಸಿಗುತ್ತದೆ. ಸಾಮಾನ್ಯವಾಗಿ ದೇವತಾಮೂರ್ತಿಗಳಿಗೆ ಮಾತ್ರ ಪ್ರಭಾವಳಿ ಅಳವಡಿಸಿರುತ್ತಾರೆ, ಕಲ್ಲಿನಲ್ಲಿ ಮಾಡುವಾಗ ಮೂಲ ವಿಗ್ರಹದ ಜೊತೆಯಲ್ಲಿಯೇ ಏಕಶಿಲೆಯಲ್ಲಿಯೇ ಮಾಡಿರುತ್ತಾರೆ.

ಆದರೆ ಲೋಹಗಳಲ್ಲಿ ಮಾಡುವಾಗ ವಿಗ್ರಹ ಮತ್ತು ಪ್ರಭಾವಳಿ ಬೇರೆ ಬೇರೆ ಮಾಡುವ ಸಾಧ್ಯತೆ ಇದೆ. ಚಿನ್ನ, ಬೆಳ್ಳಿ, ತಾಮ್ರ, ಹಿತ್ತಾಳೆಗಳಲ್ಲಿ ಮಾಡಬಹುದಾದ ಪ್ರಭಾವಳಿಯಲ್ಲಿ ಅತ್ಯಂತ ಚಿಕ್ಕದಾದವುಗಳಿಗೆ ಒಂದೇ ಎರಕದಲ್ಲಿ ವಿಗ್ರಹ ಮತ್ತು ಪ್ರಭಾವಳಿ ಮಾಡುತ್ತಾರೆ. ದೊಡ್ಡ ಪ್ರಮಾಣದಲ್ಲಿ ಮಾಡುವಾಗ ಅನುಸರಿಸುವ ಕ್ರಮವೇ ಬೇರೆಯಾಗಿರುತ್ತದೆ.

ಮಾರುಕಟ್ಟೆಗಳಲ್ಲಿ ಅಳತೆಗೆ ಅನುಗುಣವಾದ ತಗಡನ್ನು ತಂದು, ಮೊದಲೇ ಸಿದ್ದ ಪಡಿಸಿಟ್ಟುಕೊಂಡಿದ್ದ ಸೀಸದ ಕಡ್ಡಿಯ (pencil Sketch) ರೇಖಾಚಿತ್ರವನ್ನು ಅದರ ಮೇಲಿಟ್ಟು ನಕಲು (trace) ಮಾಡಿಕೊಳ್ಳಬೇಕು. ನಂತರ ಪ್ರಭಾವಳಿ ಆಕೃತಿಗೆ ಹೊರತಾದ ಭಾಗವನ್ನು (Extra Material) ತಗಡು ಕತ್ತರಿಸುವ ಕತ್ತರಿಯಿಂದ ಅಥವಾ ಚಾಣದ ಉಳಿಯಿಂದ ಹೊಡೆದು ತೆಗೆಯುವ ಕ್ರಮದಿಂದಾಗಲಿ, ಅನಾವಶ್ಯಕ

ಭಾಗವನ್ನು ತೆಗೆಯಬೇಕು. ನಂತರ ವಿವಿಧ ಚಾಣ ಅಥವಾ ಉಳಿಗಳನ್ನು ಉಪಯೋಗಿಸಿ ಉಬ್ಬುಗೆತ್ತನೆ, ಇಳಿಗೆತ್ತನೆ ಮೂಲಕ ಚಿತ್ರದ ಆಕಾರಕ್ಕೆ ತಕ್ಕಂತೆ ಸುತ್ತಿಗೆಯಿಂದ ಕುಟ್ಟುವ ಮೂಲಕ ಆಕಾರ ಹೊರಹಮ್ಮಿಸಬೇಕು.

ತಗಡು ಮೃದು ಮತ್ತು ಅತಿತೆಳುವಾದುದರಿಂದ, ಕಬ್ಬಿಣದ ಸುತ್ತಿಗೆಗಿಂತ ಮರದ ಸುತ್ತಿಗೆ ಉಪಯೋಗಿಸಿ ನಿರ್ದಿಷ್ಟ ಆಕಾರ, ವಿನ್ಯಾಸ ಪಡೆಯಬಹುದು. ಪ್ರಭಾವಳಿಯ ಎತ್ತರ, ಅಗಲಗಳು ಜಾಸ್ತಿ ಆದಂತೆ ಅದನ್ನು ಮೂರು ಅಥವಾ ಐದು ಭಾಗಗಳನ್ನಾಗಿ ಮಾಡಬಹುದೆನ್ನುತ್ತಾರೆ ನೀಲಕಂಠಾಚಾರ್ಯರು.

ಮೂರು ಭಾಗ ಮಾಡಬೇಕಾದಲ್ಲಿ ಪ್ರಭಾವಳಿಯ ಎಡ, ಬಲಗಳು ಒಂದೊಂದು ತುಂಡುಗಳಾದರೇ ಶಿಖಿರಭಾಗವಾದ ಸಿಂಹ ಲಲಾಟವೇ ಒಂದು ಭಾಗವಾಗಿರುತ್ತದೆ ಅಥವಾ ಐದು ಭಾಗ ಮಾಡಬೇಕಾದಲ್ಲಿ ಪ್ರಭಾವಳಿಯ ಸ್ತಂಭದಂತಿರುವ ಭಾಗಗಳನ್ನೇ ಬೇರೆ ಮಾಡಿ, ಕಮಾನಿನಂತಿರುವುದನ್ನು ಬೇರೆಮಾಡಿ ಸಿಂಹಲಲಾಟದೊಡನೆ ಜೋಡಿಸುವ ಮೂಲಕ ಏಕೀಕೃತವಾದ ಪ್ರಭಾವಳಿ ಕಂಡುಬರುತ್ತದೆ. ಈ ಪ್ರತ್ಯೇಕ ಗೊಳಿಸಿದ ಮೂರು ಅಥವಾ ಐದು ಭಾಗಗಳನ್ನು ಬೆಸುಗೆ (Soldering) ಮೂಲಕ ಜೋಡಿಸಬಹುದು, ಅಥವಾ ಅವುಗಳಿಗೆ ನಟ್ ಮತ್ತು ಬೋಲ್ಟ್‌ಗಳನ್ನಾದರೂ ಅಳವಡಿಸಬಹುದೆನ್ನುತ್ತಾರೆ. ಬೆಸುಗೆರಹಿತವಾಗಿ ಮಾಡುವುದರಿಂದ ಒಂದು ಊರಿಂದ ಮತ್ತೊಂದು ಊರಿಗೆ ಸ್ಥಳಾಂತರಿಸಲು ಹಾಗೂ ಇಕ್ಕಟ್ಟಾದ ಸ್ಥಳದಲ್ಲಿ ಬಿಚ್ಚಿಡಲು ಸಹಕಾರಿಯಾಗುತ್ತದೆ. ಈ ಕ್ರಮಗಳು ಮಾಡುವವರ ಮನೋದೃಷ್ಟಿಯನ್ನವಲಂಬಿ ಸಿರುತ್ತದೆ.

ಇದೇ ಕ್ರಮವನ್ನು ಅನುಸರಿಸಿ ಮಾಡಿರುವ ಪ್ರಭಾವಳಿ ಧರ್ಮಸ್ಥಳದ ಮಂಜುನಾಥೇಶ್ವರ ದೇವಾಲಯದಲ್ಲಿದ್ದು, ನೀಲಕಂಠಾಚಾರ್ಯರು ತಮ್ಮ ವಿಶೇಷ ಕಲಾಕೌಶಲ್ಯದಿಂದ ಪ್ರಭಾವಳಿಯ ಎರಡು ಪಕ್ಕಗಳಲ್ಲಿಯೂ (Backand Back) ಒಂದೇ ತೆರನಾಗಿ ಕಾಣುವಂತೆ ರೇಖಿನ ಕೆಲಸ ಮಾಡಿದ್ದಾರೆ. ಇದರ ಮೂಲ ಉದ್ದೇಶ ಉತ್ಸವ ಮೂರ್ತಿ ಮೆರವಣಿಗೆ ಹೊರಟಾಗ ಭಕ್ತ ಸಮುದಾಯ ಹಿಂದೆ ಮತ್ತು ಮುಂದೆಯೂ ಇರುತ್ತಾರೆ. ಅವರೆಲ್ಲರಿಗೂ ವೀಕ್ಷಿಸಲನುವಾಗುವಂತೆ ಪ್ರಭಾವಳಿಯ ದ್ವಿಪಕ್ಕಗಳಲ್ಲಿ ಏಕರೂಪದ ವಿನ್ಯಾಸಗೊಳಿಸಿರುವ ಕ್ರಮ, ಈ ಹಿಂದೆ ಶಿಲ್ಪಿ ಸಿದ್ಧಾಂತಿ ಸಿದ್ಧಲಿಂಗಸ್ವಾಮಿಗಳು ಮೈಸೂರಿನಲ್ಲಿರುವ ವಿಶ್ವಕರ್ಮ ಮೂರ್ತಿಯನ್ನು ಇದೇ ರೀತಿ ಕಲ್ಲಿನಲ್ಲಿ ಕೆತ್ತಿರುವುದರ ನೆನಪು ತರುತ್ತದೆ. ಈ ವಿಶ್ವಕರ್ಮಮೂರ್ತಿ ಇಡೀ ರಾಷ್ಟ್ರದಲ್ಲಿಯೇ

ವಿಶೇಷ ಗುಣಲಕ್ಷಣವುಳ್ಳ, ದ್ವಿಪಕ್ಕಗಳಲ್ಲಿ ಏಕರೂಪವಾದ ಮುಖ, ದೇಹ, ಬಾಹುಗಳು, ದರಿಸಿದ ಶಿಖೆ, ಮುಕುಟ, ಆಭರಣ, ಕುಳಿತಾಸನದ ಹಿನ್ನಲೆ ಪ್ರಭಾವಳಿ, ಎಲ್ಲವನ್ನು ಒಳಗೊಂಡ ಶಿಲ್ಪವಾಗಿರುತ್ತದೆ.

ನೀಲಕಂಠಾಚಾರ್ಯರು ಮಾಡುವ ಕ್ರಮವನ್ನು ವಿವರಿಸುತ್ತಾ ರೇಖಿನ ಕೆಲಸ ಮಾಡುವಾಗ ಅರಗು ಬಹಳ ಮೃದುವಾಗಿರಬೇಕು. ಅದಕ್ಕಾಗಿ ಕುಟ್ಟಿಮಾಡಿಟ್ಟಿಕೊಂಡ ೨ ಭಾಗ ರೊಷನ್ ೧ಭಾಗ ಬೆರಣಿಬೂದಿ ಕಲೆಸಿಟ್ಟುಕೊಂಡು, ಕುದಿಯುವ ಕಡ್ಲೆಕಾಯಿಎಣ್ಣೆಗೆ ಸೇರಿಸುತ್ತಾ ಹೋಗಬೇಕು. ಕೆಲಕಾಲ ಬೇಯಲು ಬಿಡಬೇಕು, ಹೆಚ್ಚಿನ ಮಿಶ್ರಣ ಹಾಕಿದರೇ ಗಟ್ಟಿಯಾಗುವುದರಿಂದ ಪಾಯಸದಂತಾಗಲು ಎಷ್ಟು ಬೇಕೋ ಅಷ್ಟು ಮಾತ್ರ ಮಿಶ್ರಣ ಮಾಡಬೇಕು. ಆ ಪಾಯಸದಂತಹ ಮಿಶ್ರಣವನ್ನು ಅಪೂರ್ಣಗೊಂಡಿರುವ ಪ್ರಭಾವಳಿಯ ಫಲಕಗಳ ಮೇಲೆ ಹಾಕಿಕೊಂಡರೇ ಅದು ತಗಡಿನ ಉಬ್ಬುತಗ್ಗು ಭಾಗಗಳಿಗೆ ಅಂಟಿಕೊಂಡು ಮುದ್ದು ಮುದ್ದೆಯಾಕಾರದಲ್ಲಿರುತ್ತದೆ, ತದನಂತರ ನಾವು ವೃತ್ತ, ಅರೆವೃತ್ತ, ತ್ರಿಕೋನ, ಏಕಮುಖ, ದ್ವಿಮುಖ, ಚಪ್ಪಟೆ ಮುಂತಾದ ಚಾಣಗಳನ್ನು ಬಳಸಿ, ಸುತ್ತಿಗೆಯಿಂದ ಹೊಡೆಯುವುದರಿಂದ ನಾವು ಬಯಸಿದ ರೀತಿಗೆ ಚಿತ್ರ ಮೂಡುತ್ತಾ ಹೋಗುತ್ತದೆ. ಹಾಗೆ ಒಂದುಪಕ್ಕದಲ್ಲಿ ಮಾಡಿ ಮತ್ತೊಂದು ಮಗ್ಗುಲಿಗೆ ಇದೇ ತೆರನಾದ ಸಮ್ಮಿಶ್ರವನ್ನು ಬಿಸಿ ಮಾಡಿ ಹಾಕಿ ಮೊದಲು ಹಾಕಿರುವುದನ್ನು ತೆಗೆದರೆ ಇನ್ನೊಂದು ಮಗ್ಗುಲಿನ ಕೆತ್ತನೆಗೆ ಅನುಕೂಲವಾಗುತ್ತದೆ. ಎರಡು ಮೂರು ಬಾರಿ ಬಿಸಿ ಮಾಡಿ ಕೆಲಸಕ್ಕೆ ಅನುಗುಣವಾಗುವ ರೀತಿಯಲ್ಲಿ ಅರಗನ್ನು ಹಾಕಿಕೊಂಡು ನಿರ್ಧಿಷ್ಟ ಆಕಾರ ತರಬೇಕು.

ನಂತರದಲ್ಲಿ ಪ್ರಭಾವಳಿಯಲ್ಲಿ ಬರುವ ನಯಗೆಲಸ (Finishing work) ಮಾಡುವಾಗ ಅರಗು ಕಾಯಿಸುವ ಕ್ರಮ ಬದಲಾಗುತ್ತದೆ. ಅಂದರೆ ಎಣ್ಣೆ ಪ್ರಮಾಣ ಕಡಿಮೆಗೊಳಿಸಿ ಗಡಸುಗೊಳಿಸಬೇಕು (Hard) ಹಾಗೆ ಗಡಸುಗೊಳಿಸುದುದನ್ನು ಹಿಂದಿನ ಕ್ರಮದಂತೆಯೇ ಪ್ರಭಾವಳಿಯ ಫಲಕದ ಮೇಲೆ ಹಾಕಿಕೊಂಡು ನಯ ಗೆಲಸ ಆರಂಬಿಸಬೇಕು. ಇದೊಂದು ವಿಳಂಬದ ಪ್ರಕ್ರಿಯೆ. ಅವಸರದಿಂದ ನಿರ್ಧಿಷ್ಟ ರೂಪ, ಚಿತ್ರ ಬರುವುದಿಲ್ಲ. ಹಾಗೆಯೇ ಮಿಶ್ರಣವನ್ನು ಸಹ ಅತಿಯಾಗಿ ಗಟ್ಟಿಗೊಳಿಸಿದರೂ (Hard) ಸಹ ಕೆಲಸಕ್ಕೆ ಉಪಯೋಗವಾಗುವುದಿಲ್ಲವೆನ್ನುತ್ತಾರೆ. ಕೊಬ್ರಿ ಮಿಠಾಯಿಗೆ ತಯಾರು ಮಾಡುವ ಪಾಕ ಹದವಾಗಿದ್ದರೇ, ಮಾತ್ರ ಅದು ಕುಯ್ಯಲು ಬರುತ್ತದೆ. ಇಲ್ಲವಾದರೇ ಅದು ತೆಳುವಾದರೇ ಕೈಗೆ ಅಂಟಿಕೊಂಡು ಬರದಿರಬಹುದು ಅಥವಾ

ತೀರ ಗಟ್ಟಿಯಾದರೇ ಪುಡಿ ಪುಡಿಯಾಗಬಹುದು ಹಾಗೆ ಇದು ಸಹ ಕಾಯಿಸುವ ಮಿಶ್ರಣ ಹದವಾಗಿರಬೇಕು. ಇದು ಅನುಭವದಿಂದ ಬರುವ ಅಂಶವೆನ್ನುತ್ತಾರೆ ನೀಲಕಂಠಾಚಾರ್ಯರು. ಪ್ರಭಾವಳಿಗಳಿಗೆ ನಿರ್ಧಿಷ್ಟ ಅಳತೆಗಳಲ್ಲ. ಅದು ಆಯಾಯ ಮೂರ್ತಿಗಳನ್ನು ಅವಲಂಬಿಸಿರುತ್ತದೆ. ಒಂದು ವೇಳೆ ಮೂರ್ತಿಯು ಹಿಡಿದ ಆಯುಧವು ಉದ್ದವಾಗಿದ್ದರೇ, ಅಥವಾ ಬಾಹುವು ಉದ್ಧವಾಗಿ ಚಾಚಿದ್ದರೇ ಇಂತಹ ಸಂದರ್ಭದಲ್ಲಿ ಪ್ರಭಾವಳಿಯಿಂದ ಕೈಹೊರಗೆ ಬರುವ ಸಂದರ್ಭವುಂಟು. ಆದರೇ ಶಿಲ್ಪದ ಉದ್ಧ, ಅಗಲ, ದಪ್ಪ ಮತ್ತವುಗಳು ನಿಲ್ಲುವುದಕ್ಕೆ ಆದಾರ (Support) ಇವುಗಳನ್ನು ಅವಲಂಬಿಸಿ ಶಿಲ್ಪದ ಒಟ್ಟಂದಕ್ಕೆ ಮಾರಕವಾಗದಂತೆ ನಿರ್ಧಾರ ಕೈಗೊಳ್ಳ ಬೇಕಾಗುತ್ತದೆನ್ನುತ್ತಾರೆ.

ಇಂತಹ ಹಲವಾರು ಪ್ರಭಾವಳಿಗಳನ್ನು ವಿವಿದ ಅಳತೆಗಳಲ್ಲಿ ಕರ್ನಾಟಕದ ನಾನಾ ಭಾಗಗಳಿಗೆ ಮಾಡಿಕೊಟ್ಟಿದ್ದಾರೆ. ಇವರ ವಿಶೇಷತೆ ಅಂದರೇ ಪ್ರತಿ ಪ್ರಭಾವಳಿಯಲ್ಲಿಯೂ ಅಂದ ಚೆಂದದ ಕುಸರಿ ಕೆಲಸ ನಯಗಾರಿಕೆ ಎದ್ದು ತೋರುತ್ತದೆ.

**ಶೇಷ ಶಯನ** : ವಿಗ್ರಹಗಳ ರಚನೆಯಲ್ಲಿ ಸ್ಥಾನಿಕ (ನಿಂತಿರುವ) ಆಸನ (ಕುಳಿತಿರುವ) ಶಯನ (ಮಲಗಿರುವ) ಎಂಬ ಮೂರು ಬಗೆಯುಂಟು. ಅದಲ್ಲದೇ ಶಯನ ವಿಗ್ರಹಗಳಲ್ಲಿ ಯೋಗಶಯನ, ಭೋಗಶಯನ, ಸೃಷ್ಟಿಶಯನ, ಸಂಹಾರಶಯನ ಎಂಬುದಾಗಿ ವಿಭಾಗಿಸುವುದುಂಟು. ಇಂತಹ ವಿಗ್ರಹಗಳನ್ನು ಪೂಜಿಸುವ ದೃಷ್ಟಿಯೂ ಸಹ ಒಂದೊಂದು ತೆರನಾಗಿರುತ್ತದೆ.

ಯೋಗ ಶಯನ ವಿಗ್ರಹವನ್ನು ತತ್ವಾರ್ಥ ಚಿಂತಕರು, ದಾರ್ಶನಿಕರು, ಮೋಕ್ಷಾಪೇಕ್ಷಿಗಳು, ಭೋಗಶಯನವನ್ನು ತಮ್ಮ ಮನಸ್ಸಿನ ಆಸೆ, ತುಡಿತ, ಕಾಮನೆಗಳನ್ನು ಪೂರೈಸಿಕೊಡಲೆಂದು ಪ್ರಾರ್ಥಿಸಲು, ಸೃಷ್ಟಿಶಯನ ವಿಗ್ರಹವನ್ನು ಮಕ್ಕಳ ಸಂತಾನ, ಸುಖ ಸಮೃದ್ಧಿ ಬಯಸುವವರು, ಸಂಹಾರಶಯನ ವಿಗ್ರಹವನ್ನು ತಮಗಾಗದವರ ನಾಶಕ್ಕಾಗಿ, ದುಷ್ಟ ಸಂಹಾರಕ್ಕಾಗಿ ಆರಾದಿಸುವ ಕಾರಣಕ್ಕಾಗಿ ಅಂತಹ ಮೂರ್ತಿಗಳನ್ನು ಬಯಸುತ್ತಾರೆ. (ಬ್ರಾಹ್ಮಿಯ ಚಿತ್ರಕರ್ಮ ಶಾಸ್ತ್ರಂ)

ನೀಲಕಂಠಾಚಾರ್ಯರು ಮಾಡಿರುವ ಬೆಳ್ಳಿಶಿಲ್ಪ ಶೇಷಶಯನ ಸಹ ಯೋಗಶಯನ ಮೂರ್ತಿಯಂತೆ ಐದು ಹೆಡೆಗಳುಳ್ಳ ಸರ್ಪದ ಮೇಲೆ ಮಲಗಿರುತ್ತಾನೆ. ತುಸು ಎಡಕ್ಕೆವಾಲಿರುವ ಶಿರಸ್ಸು ಸ್ವಲ್ಪ ತಲೆ ಎತ್ತಿದಂತೆ ಭಾಸವಾಗುತ್ತದೆ. ಅದು ಅಭಿವೃದ್ದಿಯ ಸಂಕೇತವು ಹೌದು. ಶಂಖ ಚಕ್ರಗಳನ್ನು ಮೇಲಿನ ಎಡಬಲ ಹಸ್ತಗಳಲ್ಲಿಯೂ ಮತ್ತೊಂದು

ಎಡಹಸ್ತವು ತೊಡೆಯ ಕಡೆಗೆ ಚಾಚಿದ್ದು ಕಮಲವನ್ನು ಹಿಡಿದಿದ್ದರೇ ಇನ್ನೊಂದು ಬಲ ಹಸ್ತವು ಶಿವಲಿಂಗವನ್ನು ಹಿಡಿದಿದೆ. ಪಕ್ಕದಲ್ಲಿರುವ ಗದೆಯು ಸುತ್ತಿಕೊಂಡಿರುವ ಸರ್ಪಕ್ಕೆ ಒರಗಿದಂತಿದ್ದು, ಅದರ ತುದಿ ಪೀಠಕ್ಕೆ ಅಂಟಿಕೊಂಡಂತೆ ಮಾಡಿದ್ದಾರೆ. ಮೂರ್ತಿಯ ದೇಹ ನೀಳವಾಗಿದ್ದು ಮಂಡಿ ಮಾತ್ರ ತುಸು ಬಗ್ಗಿದಂತೆ ಮಾಡಿ, ಎರಡು ಪಾದಗಳನ್ನು ಕಮಲ ಪೀಠದ ಮೇಲಿರಿಸಿದಂತೆ ಕಾಣುತ್ತದೆ.

ನಾಭಿಯಿಂದ ಬ್ರಹ್ಮೋತ್ಪತ್ತಿ ಅನ್ನುವ ಸಂಕೇತವಾಗಿ ನಾಭಿಯ ಬಳಿಯಲ್ಲಿ ಕಮಲದ ಮೇಲೆ ಕುಳಿತಿರುವ ಬ್ರಹ್ಮನ ಮೂರ್ತಿ ಮಾಡಿದ್ದಾರೆ. ಇದು ವಿಗ್ರಹದಿಂದ ಪ್ರತ್ಯೇಕವಾಗಿದ್ದು ಎತ್ತರದ ಸ್ತಂಬದ ಮೇಲೆ ಕುಳಿತಂತಿದೆ. ಪಾದದ ಬಳಿ ಇರಬೇಕಾದ ಲಕ್ಷ್ಮಿಯನ್ನು ವಿಗ್ರಹದ ಉದ್ಧಗಲಕ್ಕೆ ಅನುಗುಣವಾಗುವಂತೆ ತುಸು ಬಾಗಿದ ಕಾಲಿನತ್ತಿರ ವಿಗ್ರಹವನ್ನು ಪ್ರತ್ಯೇಕ ಮಾಡಿ ಅದಕ್ಕೊಂದು ಎತ್ತರದ ಪೀಠ ಮಾಡುವುದರ ಮೂಲಕ ಶಯನ ಮೂರ್ತಿಗಿಂತ ಕೊಂಚ ಎತ್ತರದಲ್ಲಿ ಕಾಣುವಂತೆ ಮಾಡಿದ್ದಾರೆ.

ಐದು ಹೆಡೆಯ ಸರ್ಪ ಮೂರು ಸುತ್ತು ಸುತ್ತಿಕೊಂಡಿದ್ದು, ಅದರ ಮೇಲೆ ಮಲಗಿರುವ ವಿಷ್ಣುವಿಗೊಂದು ಎತ್ತರದ ಶಯನವಿನ್ನು ಒದಗಿಸಿದಂತಿದೆ. ಅದಕ್ಕಂಟಿ ಕೊಂಡಿರುವ ಪೀಠ ಮಟ್ಟಸವಾಗಿದ್ದು ಎರಡು ಮೂರು ಹಂತಗಳಲ್ಲಿ (steps) ನಕಾಶೆಯ ಮೂಲಕ ಅಂದಗೊಳಿಸಿದ್ದಾರೆ. ಮೊದಲು ಗರುಡದರ್ಶನ ಮಾಡಿ ಮುನ್ನಡೆಯಿಡಬೇಕೆಂಬ ಭಾವನೆಗನುಗುಣವಾಗಿ ಅಂಜಲಿ ಬದ್ಧನಾಗಿ ಕುಳಿತಿರುವ ಗರುಡನನ್ನು ಪ್ರತ್ಯೇಕ ಮಾಡಿದ್ದಾರೆ. ಶೇಷಶಯನ ವಿಗ್ರಹ ಆರಾದಕರಿಗೆ ಮಾತ್ರವಲ್ಲದೇ ಕಲಾದೃಷ್ಟಿಯಿಂದಲೂ ಉತ್ತಮೋತ್ತಮವಾಗಿದೆ.

**ವೀರಲಕ್ಷ್ಮಿ**

ಲಕ್ಷ್ಮೀಃ ಪದ್ಮಾಸನಾಸೀನಾ ದ್ವಿಬುಜ ಕಾಂಚನಪ್ರಭಾ
ಹೇಮ ರತ್ನೋಜ್ವಲದ್ದಿವ್ಯಾ ಕರ್ಣಕುಂಡಲ ಮಂಡಿತಾ॥
ಸುಯವ್ವನಾ ಸುರಮ್ಯಾಂಗಾ ಕುಂಚಿತಭ್ರೂಃ ಸವಿಭ್ರಮಾ
ರಕ್ತೊಷ್ಠೀ ಪೇನಗಂಡಾ ಚ ಕಂಚುಕಾಡ್ಯ ಸ್ತನದ್ವಯೀ॥
ಶಿರಸೋ ಮಂಡನಂ ಚೈವಾ ಹಸ್ತಾತು ವರದಾಭಯ
ಅಂಬುಜಂ ದಕ್ಷಿಣೇ ಹಸ್ತೆ ವಾಮೇಶ್ರೀ ಪವಮಿಷ್ಯತೇ॥
ಸುಮಧ್ಯಾ ವಿಪುಲ ಶ್ರೋಣೀ ಶೋಭನಾಂಬರ ವೇಷ್ಟಿತಾ
ಮೇಖಲಾ ಕಟಿಸೂತ್ರಾ ಚ ಸರ್ವಾಭರಣ ಭೂಷಿತ॥

ಶ್ರೀ ಕಾಶ್ಯಪಶಿಲ್ಪಶಾಸ್ತ್ರ

ಲಕ್ಷ್ಮಿ ಚಂಚಲೆ ಯಾರಲ್ಲಿಯೂ ನೆಲೆಯಾಗಿ ನಿಲ್ಲುವುದಿಲ್ಲವೆಂಬ ಭಯವುಂಟು. ಅದಕ್ಕಾಗಿಯೇ ವೀರಲಕ್ಷ್ಮಿಯನ್ನು ಪೂಜಿಸುವುದರಿಂದ ಆರಾಧಕರ ಮನೆಯಲ್ಲಿ ನೆಲೆ ನಿಲ್ಲುತ್ತಾಳೆಂಬ ನಂಬಿಕೆ ಬಹಳಷ್ಟು ಜನರ ಮನದಲ್ಲಿದೆಯಾದ್ದರಿಂದ ವೀರಲಕ್ಷ್ಮೀಯ ವಿಗ್ರಹವನ್ನು ಮಾಡಿಸಿ ಮನೆಯಲ್ಲಿಟ್ಟುಕೊಂಡು ಪೂಜಿಸುವವರುಂಟು.

ಈ ರೀತಿಯಾಗಿ ಅಪೇಕ್ಷಿಸುವವರಿಗಾಗಿ ಹಲವಾರು ಮೂರ್ತಿಗಳನ್ನು ಮಾಡಿ ಕೊಟ್ಟಿರುವ ನೀಲಕಂಠಾಚಾರ್ಯರು ವೀರ ಲಕ್ಷ್ಮಿಯ ಲಕ್ಷ್ಯ ಲಕ್ಷಣಗಳನ್ನು ಕಾಶ್ಯಪ ಶಿಲ್ಪ ಶಾಸ್ತ್ರದಲ್ಲಿ ಹೇಳಿರುವಂತೆ ರಚಿಸಿದ್ದು ಶಿಲ್ಪಕ್ಕೆ ಒಂದಷ್ಟು ಪರಿಪೂರ್ಣತೆಯನ್ನು ಕೊಡಲು ಲಕ್ಷ್ಮಿಯ ವಿಗ್ರಹವನ್ನು ಪೀಠದಲ್ಲಿ ಕುಳ್ಳಿರಿಸಿ ಹಿನ್ನೆಲೆಗೊಂದು ಪ್ರಭಾವಳಿ ಅಳವಡಿಸಿದ್ದಾರೆ. ಹತ್ತಂಗುಲ ಎತ್ತರವಿರುವ ಈ ವೀರ ಲಕ್ಷ್ಮೀಯ ಶಿರಸ್ಸಿನ ಹಿಂಬದಿಯಲ್ಲಿ ವೃತ್ತಾಕಾರವಾದ ಪ್ರಭಾವಲಯವು, ಉನ್ನತ ವಿನ್ಯಾಸಗಳಿಂದ ಕೂಡಿದ ಕಿರೀಟವು ಶೋಭಿಸುತ್ತದೆ.

ಬಿಲ್ಲಿನಾಕಾರದಲ್ಲಿ ಬಗ್ಗಿಸಿದಂತೆ ಕಾಣುವ ಹುಬ್ಬುಗಳು ತೇಜಪುಂಜವಾದ ಕಣ್ಣುಗಳನ್ನು ವಿಗ್ರಹದಲ್ಲಿ ಕಾಣಿಸಿದ್ದಾರೆ. ಯಾವುದೇ ವಿಗ್ರಹ ಮಾಡಿದರೂ ಅದಕ್ಕೊಂದು ಶಾಸ್ತ್ರಾದಾರ ರೂಪವಿಟ್ಟುಕೊಂಡೇ ರಚಿಸಬೇಕೆಂದಿರುವ ನೀಲಕಂಠಾಚಾರ್ ಅವರು ಮನೋಧರ್ಮವನ್ನು ಮೆಚ್ಚಬೇಕಾದದು.

**ನಾಟ್ಯ ಸರಸ್ವತಿ :** ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣರಾದ ಬ್ರಹ್ಮ ವಿಷ್ಣು ಮಹೇಶ್ವರರ ಅರ್ಧಾಂಗೀಯರಾಗಿ ಆಂತರಿಕ ಶಕ್ತಿ ಸ್ವರೂಪರಾದ ಸರಸ್ವತಿ, ಲಕ್ಷ್ಮಿ, ಪಾರ್ವತಿಯರು ದೇವತೆಗಳಲೆಲ್ಲಾ ಸರ್ವ ಶ್ರೇಷ್ಟರು, ನಮ್ಮ ಪುರಾಣ ಕತೆಗಳು ಬೆಳೆಯುವುದಕ್ಕೆ ತಾಯಿ ಬೇರುಗಳೇ ಇವರುಗಳು.

ಸರಸ್ವತಿ ವಿದ್ಯೆಯ ಅದಿಧೇವತೆ, ವಿದ್ಯಾ ವಿಹೀನಶ್ಯಃ ಪಶುಃ ವಿದ್ಯೆ ಇಲ್ಲದವನನ್ನು ದನಕ್ಕೆ ಸಮಾನ ಎಂದಿತು ನಮ್ಮ ಪುರಾಣಗ್ರಂಥಗಳು. ಪ್ರಾಣಿ ಪಕ್ಷಿಗಳಿಗಿಂತ ಕಡೆಯಾಗುವುದಕ್ಕಿಂತ ವಿದ್ಯೆ ಕಲಿಯುವುದೇ ಮೇಲಲ್ಲವೆ. ಅದಕ್ಕಾಗಿಯೇ ವಿದ್ಯಾ ಅದಿಧೇವತೆಯಾದ ಸರಸ್ವತಿಯ ಪೂಜೆ ಆರಾದನೆ ಅತ್ಯಾವಶ್ಯಕ ಎನ್ನುತ್ತಾರೆ ನಮ್ಮಹಿರಿಯರು.

ಸಾಮಾನ್ಯವಾಗಿ ವೀಣಾವಾಣಿ ಸರಸ್ವತಿಯನ್ನೇ ನೋಡಿ ಕಣ್‌ಮನ ತುಂಬಿ ಕೊಂಡಿದ್ದ ನಮಗೆ ನೀಲಕಂಠಾಚಾರ್ಯರ ನೃತ್ಯ ಸರಸ್ವತಿಯನ್ನು ನೋಡಿದಾಗ ಭಿನ್ನವಾದ

ಶಿಲ್ಪವೆಂದೆನೆಸುತ್ತದೆ. ಈ ಶಿಲ್ಪ ಅತ್ಯಂತ ಆಕರ್ಶಣೆಗೊಂಡು ಕರ್ನಾಟಕದಿಂದ ಕಲ್ಕತ್ತಾ ಕಡೆಗೆ ಪಯಣಿಸಿದೆ.

ನಾಲ್ಕು ಕೈಗಳುಳ್ಳ ಸರಸ್ವತಿ ನೃತ್ಯ ಭಂಗಿಯಲ್ಲಿ ನಿಂತಿದ್ದು ಒಂದು ಪಾದ ನೆಲದ ಮೇಲೆ ಇದ್ದರೆ ಇನ್ನೊಂದು ಪಾದ ಸ್ವಲ್ಪ ಮೇಲೆತ್ತಿದೆ. ಬಲಗೈಯೊಂದರಲ್ಲಿ ವೀಣೆ ಎಡಗೈ ಒಂದರಲ್ಲಿ ಪುಸ್ತಕದ ಕಟ್ಟು, ಸಂಗೀತ, ಸಾಹಿತ್ಯಗಳೆರಡರ ದ್ಯೋತಕವಾಗಿರುವ ಇವುಗಳನ್ನು ಹಿಡಿದಿದ್ದರೆ, ಮತ್ತೆರಡು ಕೈಗಳು ಸರಸ್ವತಿಯನ್ನು ಅರಸಿಕೊಂಡು ಬಂದವರಿಗೆ ಅಭಯ ಮತ್ತು ವರವನ್ನು ನೀಡುವುದರ ಸಂಕೇತವಾಗಿ ಹಸ್ತ ಮುದ್ರಿಕೆಗಳನ್ನು ವಿಗ್ರಹದಲ್ಲಿ ರೂಪಿಸುತ್ತಿರುವಂತೆ ಭಾಸವಾಗುತ್ತಿದ್ದು ಸಮತಟ್ಟಾದ ಪೀಠದ ಮೇಲೆ ಕಾಲೂರಿ ನಿಂತಿದೆ.

ಪಾದಗಳ ಅಡಿಯಲ್ಲಿ ವೃತ್ತಾಕಾರದ ಪೀಠವನ್ನು ರಚಿಸಿದ್ದು ಕಮಲದಳವನ್ನು ಹಾಗೂ ನಕ್ಷತ್ರ ಮಾಲಿಕಾ ನಕಾಶೆಯನ್ನು ಅಳವಡಿಸಿ ಸರಸ್ವತಿಯ ನೃತ್ಯದ ನಿಲುವಿಗೆ ಶೋಭೆತಂದಿದ್ದಾರೆ. ಈ ವಿಗ್ರಹಕ್ಕೆ ದಸರಾ ವಸ್ತುಪ್ರದರ್ಶನದಲ್ಲಿ ಬಹುಮಾನ ಲಭಿಸಿದೆ.

**ಶಿವ ಪಾರ್ವತಿ ನೃತ್ಯ :** ಸುಮಾರು ಒಂದಡಿ ಎತ್ತರದ ವಿಗ್ರಹದಲ್ಲಿ ಶಿವಪಾರ್ವತಿಯರು ನೃತ್ಯಭಂಗಿಯಲ್ಲಿದ್ದಾರೆ. ಸಾಮಾನ್ಯವಾಗಿ ಶಿವನ ನರ್ತನ ರೂಪವಾದ ನಟರಾಜನನ್ನೇ ನೋಡಿದವರಿಗೆ ಶಿವಪಾರ್ವತಿ ನೃತ್ಯ ಚಲನಚಿತ್ರ ನಾಟಕಾದಿಗಳ ನೆನಪು ತರುವುದು ಸಹಜ. ಕಲಾವಿದನ ಅಥವಾ ಶಿಲ್ಪಿಯ ಕಲಾಭಿವ್ಯಕ್ತಿ ಹಲವು ಮುಖಗಳಲ್ಲಿ ಹೊರಹೊಮ್ಮುವ ಮೂಲಕ ವೀಕ್ಷಕರಿಗೆ, ಗ್ರಾಹಕರಿಗೆ ಹೊಸಬಗೆಯ ಅಂತಃ ಸ್ಪೂರ್ತಿ ನೀಡುತ್ತದೆ. ನೀಲಕಂಠಾಚಾರ್ಯರ ಈ ವಿಗ್ರಹದಲ್ಲಿ ಶಿವನು ಚತುರ್‌ಬಾಹು, ದ್ವಿಪಾದಗಳಿಂದ ನರ್ತನ ರೂಪದಲ್ಲಿದ್ದರೇ, ಪಾರ್ವತಿ ಭರತನಾಟ್ಯ ಶೈಲಿಯಲ್ಲಿ ನಿಂತು, ಪರಸ್ಪರ ಮುಖಗಳ ಸಮಾಗಮವಾಗುವಂತೆ ಕಾಣುತ್ತದೆ. ಕಿರುನಗೆಯ ಕೋಮಲವಾದ ಪಾರ್ವತಿ ಪರಮೇಶ್ವರನತ್ತ ದೃಷ್ಟಿಹಾಯಿಸಿದರೇ, ಪರಮೇಶ್ವರನ ದೃಷ್ಟಿ ಚಂಚಲರಹಿತವಾದ ಸಹಜಗುಣದಿಂದ ಕೂಡಿದಂತೆ ಮುಖದ ವಿನ್ಯಾಸ ಮಾಡಿದ್ದಾರೆ.

ಶಿವನ ಎರಡು ಕೈಗಳಲ್ಲಿ ಡಮರುಗ ಮತ್ತು ಪಾಶಗಳಿದ್ದರೇ, ಕೆಳಮುಖವಾಗಿರುವ ಬಲಗೈಯು ಪಾರ್ವತಿಯತ್ತ ತಿರುಗಿ ನೃತ್ಯಭಂಗಿಯಲ್ಲಿದ್ದರೇ, ಎಡಗೈ ಪಾರ್ವತಿಯ ಸೊಂಟವನ್ನು ಬಳಸಿದೆ. ಉನ್ನತವಾದ ಪ್ರಭಾವಳಿ ಶಿವಪಾರ್ವತಿಯರಿಗಿಂತ ಎತ್ತರವಿದ್ದು ಸಿಂಹಲಲಾಟದಿಂದ ಕೂಡಿದೆ. ಪ್ರಭಾವಳಿಯ ಇಕ್ಕೆಲಗಳನ್ನು ಹಂಸಗಳೆರಡು ಹೊತ್ತು

ನಿಂತಂತೆ ರಚಿಸಿದ್ದು ಅವುಗಳೆಲ್ಲಕ್ಕೂ ಆಧಾರವಾಗಿರುವ ವಿಶಾಲವಾದ ಪದ್ಮಪೀಠ ಅಳವಡಿಸಿದ್ದಾರೆ.

ಭವಾನಿ : ಸುಮಾರು ಮುಕ್ಕಾಲು ಅಡಿ ಇರುವ ಭವಾನಿಯನ್ನು ಉಡುಪಿಗೆ ಮಾಡಿ ಕೊಟ್ಟಿದ್ದು ಸಿಂಹದ ಮೇಲೆ ಕುಳಿತಂತೆ ಇರುವ ಈ ಲೋಹ ಶಿಲ್ಪದಲ್ಲಿ ಭವಾನಿಯು ಪಾಶ, ಅಂಕುಶ ಜೊತೆಗೆ ಸಸ್ಯ ಸಮೃದ್ಧಿಯ ಸಂಕೇತವಾಗಿ ಕಬ್ಬಿನ ಜಲ್ಲೆ ಗರಿಕೆಯ ಗುಚ್ಛ ಹಿಡಿದಿದ್ದಾಳೆ. ಕಚ್ಚೆಯುಡುಗೆಯಲ್ಲಿ ಸುಖಾಸೀನ ಆಸನದಲ್ಲಿ ಶೋಭಿಸುವ ಭವಾನಿ ಸಕಲಾಭರಣ ಭೂಷಿತಳಾಗಿದ್ದಾಳೆ. ನೀಳವಾದ ಕೇಶರಾಶಿಯು ಶಿರದ ಹಿಂಭಾಗದಲ್ಲಿ ಪಸರಿಸಿದ್ದು ಅದಕ್ಕೊಪ್ಪುವ ರೀತಿಯಲ್ಲಿ ಕಿರೀಟ ದರಿಸಿರುವ ರೀತಿ ಉತ್ತಮ ಮಟ್ಟದ್ದಾಗಿದೆ.

ಚತುಷ್ಫಾದಿಯಾದ ಸಿಂಹದ ಮುಖಲಕ್ಷಣ ಮಾತ್ರ ನೈಜತೆಗೆ ಸ್ವಲ್ಪ ಭಿನ್ನವಾಗಿದ್ದು ಭಾವಾಭಿವ್ಯಕ್ತಿಯಲ್ಲಿ ವಿಶೇಷತೆಯೇನು ಕಂಡು ಬರುವುದಿಲ್ಲ. ವೃತ್ತಾಕಾರವಾಗಿರುವ ಪೀಠವೊಂದು ಸಿಂಹವಾಹಿನಿಯಾದ ಭವಾನಿಯನ್ನು ಹೊತ್ತು ನಿಂತಿದೆ. ಮುಖದ ಪ್ರತಿಪಾಲನವಾಗುವ ರೀತಿಯಲ್ಲಿ ಹೊಳಪನ್ನು ಮೂಡಿಸಿದ್ದಾರೆ ನೀಲಕಂಠಾಚಾರ್ಯರು.

**ಚೆನ್ನ ಕೇಶವ** : ಶ್ರೀ ವಿಷ್ಣುವಿನ ವಿವಿಧ ನಾಮರೂಪಗಳನ್ನು ಹೇಳುವ ಸಂದರ್ಭದಲ್ಲಿ ಇಪ್ಪತ್ನಾಲ್ಕು ಬಗೆಯ ವಿಷ್ಣುವಿನ ರೂಪಗಳನ್ನು ಹೇಳುತ್ತಾರೆ. ಕೇಶವ, ನಾರಾಯಣ, ಮಾದವ, ಗೋವಿಂದ, ವಿಷ್ಣು, ಮದುಸೂಧನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷಿಕೇಶ, ಪದ್ಮನಾಭ, ದಾಮೋದರ, ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅದೋಕ್ಷಜ, ನಾರಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ, ಕೃಷ್ಣ. ಈ ಎಲ್ಲಾ ದೇವತಾ ಮೂರ್ತಿಗಳೂ ನಾಲ್ಕು ಕೈಗಳನ್ನು ಹೊಂದಿದ್ದು ಅವುಗಳಲ್ಲಿ ಶಂಖ, ಚಕ್ರ, ಗದೆ, ಪದ್ಮಗಳು ಇರುತ್ತದೆಯಾದರೂ ಅವುಗಳನ್ನು ಹಿಡಿದಿರುವ ಕೈಗಳು ಮಾತ್ರ ಒಂದೊಂದು ರೂಪಕ್ಕೊಂದು ತರಹ ಬದಲಾವಣೆಗೊಳ್ಳುತ್ತವೆ. (ಬ್ರಾಹ್ಮಿಯ ಚಿತ್ರಕರ್ಮ ಶಾಸ್ತ್ರಂ ಸಂಪುಟ೩)

ನೀಲಕಂಠಾ ಚಾರ್ಯರು ರೂಪಿಸಿರುವ ಕೇಶವ ಲೋಹ ಶಿಲ್ಪವು ಈ ದ್ಯಾನ ಶ್ಲೋಕದ ಆದಾರಿತವಾಗಿದೆ.

ಪಂಕಜಂ ದಕ್ಷಣೇಯಸ್ಯ ಪಾಂಚಜನ್ಯಂ ತಥೋಪರಿ
ವಾಮೋಪರಿ ಯಸ್ಯ ಚಕ್ರಂ ಗದಾ ಚಾದೋ ವ್ಯವಸ್ಥಿತಾ
ಆದಿ ಮೂರ್ತಿ ಬೇದೋ ಯಂ ಕೇಶವೇತಿ ಪ್ರಕೀರ್ತ್ಯತೆ

ಬಲಭಾಗದ ಮೇಲುಗೈನಲ್ಲಿ ಶಂಖವು ಕೈಳಗೈನಲ್ಲಿ ಪದ್ಮವೂ, ಎಡಭಾಗದ ಮೇಲುಗೈನಲ್ಲಿ ಚಕ್ರವನ್ನು ಕೆಳಗೈನಲ್ಲಿ ಗದೆಯನ್ನು ಹಿಡಿದಿದ್ದಾನೆ. ಐದು ಅಡಿ ಎತ್ತರದ ನಿಂತಿರುವ ಈ ಮೂರ್ತಿಯ ವಿಶಾಲವಾದ ವಕ್ಷಸ್ಥಳದಲ್ಲಿ ಕಂಠಹಾರವನ್ನು ಯಜ್ಞೋಪವೀತವನ್ನು ದರಿಸಿದ್ದಾನೆ. ಶಿರದಲ್ಲಿ ದರಿಸಿರುವ ಜಟಾಮುಕುಟವು ಕುಶರಿ ಕೆಲಸದಿಂದ ಮಾಡಿದೆ. ಕಿರೀಟದ ಮದ್ಯದಲ್ಲಿ ವ್ಯಾಘ್ರದ ಜಿಹ್ವದಿಂದ ಹೊರಡುವಂತೆ ಕಾಣ್ವ ಮಕರವ್ಯಾಳಿಯು ಮತ್ತದಕ್ಕೆ ಒಪ್ಪುವ ಕಲಾತ್ಮಕ ಬಳ್ಳಿಗಳು, ಕಿರೀಟದ ತುದಿಯಲ್ಲಿ ಕಳಸವೂ ನವಿರಾದ ಕೆತ್ತನೆಯಿಂದ ಕೂಡಿವೆ.

ಕರ್ಣಗಳಲ್ಲಿ ಮಕರಾಭರಣ ಮುಖದ ಹಿಂಬದಿಯಲ್ಲಿ ಪ್ರಭಾವಲಯಗಳೆಲ್ಲವೂ ಭುಜಕ್ಕೆ ತಾಕಿದಂತೆ ವಿನ್ಯಾಸಗೊಳಿಸಿದ್ದಾರೆ. ಭುಜಕೀರ್ತಿ, ಬಾಹುಬಂಧ, ಮೊಣಕೈಗಳಲ್ಲಿ ಅಳವಡಿಸಿರುವ ಕಡಗಗಳು, ಕಾಲಿನ ಸರ ಹಾಗೆಯೇ ಸೊಂಟದ ಮೇಲೆ ನಡುವಿನ ಸುತ್ತ ದರಿಸಿರುವ ಆಭರಣಗಳು, ವೈಜಯಂತಿ ಮಾಲೆ, ಇವೆಲ್ಲವೂ ಒಂದಕ್ಕೊಂದು ಪೂರಕವಾಗಿ ಪ್ರೇರಕವಾಗಿವೆ. ವಿಗ್ರಹಕ್ಕೊಂದು ಕಳೆ ತಂದಿವೆ. ಗದೆಯ ಮೇಲಿಟ್ಟಿರುವ ಎಡಗೈನ ಬೆರಳುಂಗರಗಳು ಎದ್ದು ಕಾಣುವಂತೆ ವಿನ್ಯಾಸಗೊಳಿಸಿದ್ದಾರೆ. ಈ ಲೋಹಶಿಲ್ಪ ಮುಂಬೈ ಮಹಾಜನತೆಯ ಮೆಚ್ಚುಗೆಗೆ ಪಾತ್ರವಾಗಿ ದೇವಾಲಯವೊಂದರ ಉತ್ಸವ ಮೂರ್ತಿಯಾಗಿದೆ.

**ಭುವನೇಶ್ವರಿ :** ತೇಜೋಮಯವಾದ ಭುವನೇಶ್ವರಿ ಗಂಭೀರವದನೆಯಾಗಿ ನಮ್ಮನ್ನೇ ವೀಕ್ಷಿಸುತ್ತಿರುವಂತೆ ನೇತ್ರಗಳನ್ನು ಸೃಷ್ಟಿಸಿದ್ದು, ದುಂಡಾದ ಕಪೋಲಗಳಿಗೆ ಹೊಂದುವಂತಹ ರೀತಿಯಲ್ಲಿರುವ ಕರ್ಣಗಳೆರಡರಲ್ಲಿ ಮಕರಕುಂಡಲಗಳನ್ನು ಧರಿಸಿ, ಶಿರಸ್ಸಿನ ಮೇಲ್ಭಾಗದಲ್ಲಿ ಕಳಸದೋಪಾದಿಯಲ್ಲಿ ರಚಿಸಿರುವ ಕಿರೀಟದ ದಾರಣೆಯಿದೆ. ಉನ್ನತವಾದ ಸ್ತನಕಟ್ಟು, ಕಂಠಾಭರಣ, ಭುಜಕೀರ್ತಿ, ದ್ವಿಬಾಹುಗಳು ನಾಲ್ಕು ಕೈಗಳು, ಕಚ್ಚೆ ಪಂಚೆಯಂತಹ ಉಡುಗೆ ಕಾಲಲ್ಲಿ ಗೆಜ್ಜೆ, ಬಲಗಾಲನ್ನು ಕೆಳಕ್ಕೆ ಇಳಿಬಿಟ್ಟು ಎಡಗಾಲನ್ನು ಮಡಚಿ ಬಲತೊಡೆಯ ಸನಿಹಕ್ಕೆ ಇಟ್ಟಿರುವ ಸುಖಾಸೀನ ಮುದ್ರೆಯಲ್ಲಿರುವ ಭುವನೇಶ್ವರಿ ಪದ್ಮಕಮಲದ ಪೀಠದ ಮೇಲೆ ಕುಳಿತಿರುವ ಅಪೂರ್ವಶಿಲ್ಪ.

ಶಿಲ್ಪದ ವಿಶೇಷವೆಂದರೇ ಇದಕ್ಕೆ ಯಾವುದೇ ಪ್ರಭಾವಳಿ ಇಲ್ಲ. ತಳಪೀಠ ಮಾತ್ರ ದೊಡ್ಡದಾಗಿದ್ದು ವಿವಿಧ ಹಂತದ ಕಲಾ ಪಟ್ಟಿಗೆಗಳು ಒಂದರ ಮೇಲೊಂದು ಜೋಡಿಸಿದಂತೆ ವಿನ್ಯಾಸಗೊಳಿಸಿದ್ದಾರೆ.

**ಶ್ರೀಲಕ್ಷ್ಮೀ :** ಸುಮಾರು ಒಂದುವರೆ ಅಡಿ ಎತ್ತರದ ಶ್ರೀಲಕ್ಷ್ಮಿ ಉನ್ನತವಾದ ಪದ್ಮಾಸನದಲ್ಲಿ ಕುಳಿತಿದ್ದು ನಾಲ್ಕು ಕೈಗಳುಳ್ಳ ಕಿರೀಟದಾರಿಣಿ. ಮಂದಸ್ಮಿತ ನಗೆಯುಳ್ಳ ಮುಖಕ್ಕೆ ಒಪ್ಪುವ ರೀತಿಯಲ್ಲಿರುವ ಕರ್ಣಗಳೆರಡರಲ್ಲಿ ರತ್ನ ಕುಂಡಲಗಳನ್ನು ಧರಿಸಿದ್ದು, ಅದು ಭುಜದ ಮೇಲೆ ಇಳಿಬಿದ್ದು ಮುಖಕ್ಕೆ ಅಂದವನ್ನೀಡುತ್ತವೆ. ಕಿರೀಟದ ಅಗ್ರ ಭಾಗವು ಕಳಸದ ರೀತಿಯಲ್ಲಿದೆ. ಕಿರೀಟದ ಕೆಲಸವು ಒಳಮೈ ಮತ್ತು ಹೊರಮೈಗಳೆರಡರಲ್ಲಿ ಚಿತ್ತಾಕರ್ಶಕ ನಕಾಶೆಗಳಿಂದ ಕೂಡಿದೆ. ಅರಳಿದ ಕಮಲ ಪುಷ್ಪಗಳನ್ನು ಎಡ, ಬಲ ಕೈಗಳಲ್ಲಿ ಹಿಡಿದಿದ್ದು ಉಳಿದೆರಡು ಹಸ್ತಗಳು ಅಭಯ ಮತ್ತು ವರದ ಹಸ್ತವನ್ನೊಂದಿದೆ.

ಈ ವಿಗ್ರಹದ ವಿಶೇಷವೆಂದರೇ ಹಿನ್ನೆಲೆಯ ಪ್ರಭಾವಳಿ, ಲಕ್ಷ್ಮಿ ಮೂರ್ತಿಗಿಂತ ಎತ್ತರವಾಗಿರುವ ಈ ಪ್ರಭಾವಳಿ ಹೂ ಬಳ್ಳಿಗಳಿಂದ ಆವೃತವಾದಂತಿದೆ. ಪ್ರತಿಬಳ್ಳಿ, ಹೂಗಳ ಸಂಬಂದದ ನಡುವಿನ ಸ್ಥಳ (gap) ಗಳಿಂದಾಗಿ ಈ ವೃಕ್ಷ ಪ್ರಭಾವಳಿಯ ಕೆಲಸ ಬೇಲೂರಿನ ಶಿಲಾ ಬಾಲಿಕೆಯರ ಶಿಲ್ಪದಲ್ಲಿ ಕಾಣುವ ಸೊಗಸನ್ನು ನೆನಪಿಗೆ ತರುತ್ತದೆ.

**ರಾಮ, ಸೀತೆ, ಲಕ್ಷ್ಮಣ, ಆಂಜನೇಯ :** ವಿಗ್ರಹವನ್ನು ಮಾಡಿಸುವವರು ಸಾಮಾನ್ಯವಾಗಿ ಒಂದೊಂದೇ ಮಾಡಿಸುವುದಿಲ್ಲ, ಶ್ರೀರಾಮ ಸೆಟ್ ಅಂದರೇ ನಾಲ್ಕು ವಿಗ್ರಹಗಳನ್ನು ಮಾಡಿಸುತ್ತಾರೆ. ಶ್ರೀರಾಮ ಎಂದಿಗೂ ಒಂಟಿಯಾಗಿ ಹೋರಾಡಿದವನಲ್ಲ. ಅವನ ತಮ್ಮನಾದ ಲಕ್ಷ್ಮಣ ಅಣ್ಣನ ನೆರಳಿನಂತೆ ಅನುಸರಿಸಿ ಪೋಷಕನಾಗಿದ್ದವನು. ಹನುಮಂತ ಮತ್ತವನ ಸಹಚರರು ಇಲ್ಲದೇ ಹೋಗಿದ್ದರೇ ಸೀತೆಯನ್ನು ರಾವಣನಿಂದ ಕರೆತರಲು ಸಾದ್ಯವೇ ಆಗುತ್ತಿರಲಿಲ್ಲ. ಆದ್ದರಿಂದ ಸೀತೆ ಯುದ್ದಕ್ಕೆ ಕಾರಣ ಶಕ್ತಿಯಾದರೇ, ಲಕ್ಷ್ಮಣ, ಆಂಜನೇಯ ಪೋಷಕಶಕ್ತಿಯಾಗಿ ಶ್ರೀರಾಮನೊಡನೆ ವಿಜೃಂಬಿಸುತ್ತಾರೆ. ರಾಮ, ಲಕ್ಷ್ಮಣ, ಸೀತೆ ಆಂಜನೇಯ ಒಂದಕ್ಕೊಂದು ಅವಿನಾಭಾವ ಸಂಬಂಧ ವುಳ್ಳದಾದ್ದರಿಂದ ನಾಲ್ಕು ವಿಗ್ರಹಗಳನ್ನು ಎಲ್ಲೆಡೆ ಮಾಡಿಸುವುದು ಬೆಳೆದುಬಂದ ಸತಸಂಪ್ರದಾಯ.

ವಿಗ್ರಹ ಮಾಡುವಾಗ ಅನುಸರಿಸಬೇಕಾದ ಕ್ರಮವನ್ನು ಕುರಿತು ನೀಲಕಂಠಾಚಾರ್ ಹೀಗೆ ಹೇಳುತ್ತಾರೆ. ರಾಮ ನಾಯಕನಾಗಿರುವುದರಿಂದ ಸೀತೆಯ ವಿಗ್ರಹ ರಾಮನ ಭುಜದ ಎತ್ತರಕ್ಕೆ ಇರಬೇಕು. ದಶತಾಲವನ್ನು ಶ್ರೀರಾಮನಿಗೂ, ನವತಾಲವನ್ನು ಸೀತೆಗೂ ಅನ್ವಯಿಸಿ ಶಿಲ್ಪ ರಚಿಸಬೇಕು. ಹಾಗೆಯೇ ಲಕ್ಷ್ಮಣ ಉಪನಾಯಕನಾಗಿರುವುದರಿಂದ ಶ್ರೀರಾಮನ ನಾಸಿಕದ ತುದಿಯೆತ್ತರಕೆ ಅಂದರೇ ನಾಯಕನಿಗಿಂತ ತುಸಕಡಿಮೆ ಆಗಿ

ಅರ್ಥಾತ್ ಅಧಮ ದಶತಾಲದಲ್ಲಿರಬೇಕೆಂದು ತಿಳಿಸುತ್ತಾರೆ. ಒಂದೇ ಪೀಠದ ಮೇಲೆ ಮೂರು ಮೂರ್ತಿಗಳನ್ನು ಮಾಡಬೇಕಾದಲ್ಲಿ ಈ ಅಳತೆಗಳನ್ನು ಗಮನಿಸುವುದು ಸೂಕ್ತವೆನ್ನುವ ಇವರು ಒಂದು ವೇಳೆ ಬಿಡಿ ಬಿಡಿಯಾಗಿ ಮಾಡಬೇಕಾದಲ್ಲಿ ಪೀಠದ ಎತ್ತರವನ್ನು ತುಸ ವ್ಯತ್ಯಯಗೊಳಿಸುವುದರ ಮೂಲಕವಾಗಿಯೂ ಅಂತರವನ್ನು ಕಾಪಾಡಿಕೊಳ್ಳ ಬಹುದು ಎನ್ನುವ ವಿವರಣೆ ಮುಂದಿನ ಪೀಳಿಗೆಗೆ ಸಹಕಾರಿಯಾಗುತ್ತದೆ.

ಈ ಕ್ರಮವನ್ನೇ ಅನುಸರಿಸಿ ಶ್ರೀರಾಮ ಸೆಟ್ ಒಂದನ್ನು ಬೆಂಗಳೂರಿನ ಚಾಮರಾಜಪೇಟೆಗೆ ಮಾಡಿಕೊಟ್ಟಿದ್ದಾರೆ.

**ಪುರಾಣ ಮತ್ತು ಶಿಲ್ಪಿಗಳ ಸಂಬಂಧ :** ಪುರಾಣಕಾರರು ತಾವು ಬರೆದ ಪುರಾಣಗಳಲ್ಲಿ ತಾವು ನೋಡದಿದ್ದ ದೇವರ ಇರುವಿನ ಬಗ್ಗೆ ಕಲ್ಪನೆಗಳ ಮೂಲಕ ಅವುಗಳಿಗೊಂದು ಶಾಬ್ದಿಕ ರೂಪ ಕೊಟ್ಟರು. ಕ್ರಮೇಣ ಶಿಲ್ಪಿ ಅದಕ್ಕೊಂದು ಮಾರ್ತರೂಪ ಕೊಡುತ್ತಾ ಬಂದ. ವಿದ್ಯೆ ಇಲ್ಲದ ಜನ, ವಿದ್ಯೆಗಳಿಸಿದ್ದ ಬುದ್ಧಿವಂತರು ಸೃಷ್ಟಿಸಿದ ಶಬ್ಧ, ಅರ್ಥ, ರೂಪಗಳಿಗೆ ಮಾರುಹೋಗಿ ಅವರು ಹೇಳಿದುದೇ ಸರಿ ಎಂಬ ಭಾವನೆ ಬಲಗೊಂಡು ಮೂರ್ತ ರೂಪದ ಆರಾದನೆ ಆರಂಬವಾಯಿತು. ಹೀಗೆ ಬೃಹದಾಕಾರವಾಗಿ ಬೆಳೆದು ನಿಂತು ಮೂರ್ತಿ ಪೂಜೆ ಸರ್ವವ್ಯಾಪಿಯಾದ ಕಾರಣ. ಬೇಡಿಕೆಗಳು ಹೆಚ್ಚಾದವು, ಇದರಿಂದ ಮೂರ್ತಿಯನ್ನು ಕಡೆಯುವವರಿಗೆ ಮತ್ತು ಆ ಮೂರ್ತಿಯನ್ನು ಹಿಡಿತದಲ್ಲಿಟ್ಟುಕೊಂಡು ಆರಾದಿಸುವವರಿಗೆ, ಅತ್ಯುನ್ನತ ಅವಕಾಶಗಳು ದೊರಕುವಂತಾದವು. ಎಲ್ಲಕ್ಕಿಂತ ಮಿಗಿಲಾಗಿ ನಮ್ಮ ಕಲೆ, ಸಂಸ್ಕೃತಿ ಎಂದು ಹೇಳುವುದಕ್ಕೆ ವಿಗ್ರಹಗಳು, ದೇವಾಲಯಗಳು ಸಾಕ್ಷಿಭೂತವಾಗಿ ಶತ ಶತಮಾನಗಳು ಕಳೆದರೂ ನಮ್ಮ ಕಣ್ಮುಂದೆ ಇವೆ ಎಂಬುದು ಸಮಾದಾನಕರ ಅಂಶ.

**ಪಂಚಲೋಹ ಬಳಕೆಯಲ್ಲಿ ಪ್ರಾಮಾಣಿಕತೆ :** ಬೆಂಗಳೂರಿಗೆ ಮಾಡಿಕೊಟ್ಟಿರುವ ನಿಮಿಷಾಂಬ ವಿಗ್ರಹ ಅತ್ಯಂತ ವೈಶಿಷ್ಟಮಯವಾದದ್ದು. ೧೮ ತೊಲ ಬಂಗಾರ ೮ ತೊಲೆ ಬೆಳ್ಳಿಯನ್ನು ಇತರ ಲೋಹದೊಡನೆ ಮಿಶ್ರಣ ಮಾಡಿ ಮಾಡಿರುವ ಲೋಹ ಶಿಲ್ಪ. ಸಾಮಾನ್ಯವಾಗಿ ಇಂದು ಪಂಚಲೋಹದ ವಿಗ್ರಹ ಮಾಡುವವರು ಚಿನ್ನ ಬೆಳ್ಳಿ ಬಳಸುವುದಿಲ್ಲ. ಕಾರಣ ಅತ್ಯಂತ ದುಬಾರಿ ಲೋಹಗಳಿವು. 'ನಾನು ನಿಮಿಷಾಂಬ ದೇವಿಯನ್ನು ಮಾಡಿಕೊಟ್ಟ ಕಾಲಕ್ಕೆ ತೊಲ ಒಂದಕ್ಕೆ ೧೨೦ರೂ ಇತ್ತು. ಇಂದು ೧೦ ಗ್ರಾಂ ೪೦೦೦೦ರೂ. ಆಗಿದೆ. ಕೆಲವು ವೇಳೆ ಅದಕ್ಕಿಂತಲೂ ಹೆಚ್ಚಿಗೆಯೂ ಆಗುತ್ತದೆ. ಹೀಗಿದ್ದಾಗ ಪಂಚಲೋಹದ ದೊಡ್ಡ ವಿಗ್ರಹಗಳಗೆ ಹೆಚ್ಚಿನ ಪ್ರಮಾಣದ ಚಿನ್ನ ಬೆಳ್ಳಿ

ಹಾಕುವವರಾದರೂ ಯಾರು?' ಎಂದು ಪ್ರಶ್ನಿಸುತ್ತಾರೆ. ಒಂದು ವೇಳೆ ಹಾಕಿ ಮಾಡಬೇಕೆಂದು ಬಯಸಿದರೇ, 'ನಾನು ಚಿನ್ನ ಬೆಳ್ಳಿ ಯಾವ ಪ್ರಮಾಣದಲ್ಲಿ ಹಾಕಬೇಕೆಂಬುದನ್ನು ನನ್ನ ಗ್ರಾಹಕರಿಗೆ ತಿಳಿಸುತ್ತೇನೆ. ಇತರ ಲೋಹಗಳನ್ನು ಕರಗಿಸುವ ಸಮಯ ಸಂದರ್ಭಗಳನ್ನು ಅವರಿಗೆ ಮನವರಿಕೆ ಮಾಡಿ. ಅವರೇ ಸ್ವತಃ ಚಿನ್ನ ಬೆಳ್ಳಿಯನ್ನು ಕುದಿಯುತ್ತಿರುವ ಮೂಸೆಗೆ ಹಾಕಲು ಅನುವು ಮಾಡುತ್ತೇನೆ.' ಹಗುರ ಲೋಹಗಳಾದ್ದರಿಂದ ಬಹು ಜಾಗ್ರತೆ ಇತರ ಲೋಹಗಳೊಡನೆ ಕರಗಿ ಬೆರತುಗೊಳ್ಳುತ್ತದೆ. ನಂತರ ಯಾವುದೇ ಕಾರಣಕ್ಕೂ ಮಿಶ್ರಗೊಂಡ ಲೋಹಗಳನ್ನು ಬೇರ್ಪಡಿಸಲು ಸಾದ್ಯವಾಗುವುದಿಲ್ಲ. ಹೀಗೆ ಮಾಡುವುದರಿಂದ ಗ್ರಾಹಕನಿಗೆ ಸಹಜವಾಗಿ ಬರುವ ಅನುಮಾನವಾದ ನಾವು ಕೊಟ್ಟ ಚಿನ್ನ ಬೆಳ್ಳಿ ಅಥವಾ ಅದರ ಬೆಲೆ ಸದುಪಯೋಗ ವಾಯಿತೋ ಇಲ್ಲವೇ ಮಾಡುವಾತನೇ ಸ್ವಂತಕ್ಕೆ ಬಳಸಿಕೊಂಡನೇ ಎಂಬ ಶಂಕೆಗೆ ಅವಕಾಶವಿರುವುದಿಲ್ಲ. ಇದು ನಾನು ಅನುಸರಿಸುವ ಕ್ರಮ ಎಂದು ಬಿಚ್ಚುಮನಸ್ಸಿನಿಂದ ನುಡಿಯುತ್ತಾರೆ.

ಇತ್ತೀಚೆಗೆ ಮಾಡಿಕೊಟ್ಟಿರುವ ತ್ರಿಮಾನವುಳ್ಳ ಶಂಕರಾಚಾರ್ಯರ ಮೂರ್ತಿಯನ್ನು ಮಾಡುವಾಗಲು ಸಹ ಅವರಿಗೆ ತಿಳಿಸಿದ್ದೆನು. ಅವರೇ ಖುದ್ದಾಗಿ ಬಂದು ಚಿನ್ನ ಬೆಳ್ಳಿಯನ್ನು ಮೂಸೆಗೆ ಹಾಕಿ ಅದಕ್ಕೊಂದು ರೂಪ ಬರುವವರೆಗೆ ವೀಕ್ಷಿಸುತ್ತಿದ್ದರು. ಇದರಿಂದ ಮಾಡುವವರ, ಮತ್ತು ಮಾಡಿಸುವವರ ಸಂಬಂಧ ಗಟ್ಟಿಗೊಳ್ಳುತ್ತಾ ಹೋಗುತ್ತದೆ. ನಾವು ಇಂದು ಇರುತ್ತೇವೆ, ನಾಳೆ ಸಾಯುತ್ತೇವೆ. ಆದರೆ ನಾವು ಮಾಡಿದ ಕೆಲಸ ಶಾಶ್ವತವೆನ್ನುತ್ತಾರೆ.

ಇಂದು ಮಾಡುತ್ತಿರುವ ಪಂಚಲೋಹದ ವಿಗ್ರಹಗಳಲ್ಲಿ ಕಬ್ಬಿಣದ ಅಂಶವೇ ಬಹುಭಾಗವಿದ್ದು ಸಾಂಕೇತಿಕವಾಗಿ ಇತರ ಲೋಹಗಳನ್ನು ಬಳಸುತ್ತಾರೆ. ಅದಕ್ಕೆ ಮಾಡುವಾತನಿಗಿಂತ ಮಾಡಿಸುವಾತನು ಅತ್ಯಂತ ಕಡಿಮೆ ಬೆಲೆಯಲ್ಲಿ ಆಗಬೇಕೆಂದು ಬಯಸುವುದೇ ಆಗಿರುತ್ತದೆ. ಮೇಲಾಗಿ ಇದು ಸ್ಪರ್ಧಾ ಪ್ರಪಂಚ ಕಾಲಧರ್ಮಕ್ಕನು ಗುಣವಾಗಿ ಹೊಂದಿಕೊಂಡು ನಡೆಯಬೇಕಾದದ್ದು ಅನಿವಾರ್ಯವು ಹೌದು, ಅಗತ್ಯವು ಹೌದು ಎಂಬ ಬಿಚ್ಚು ಮನಸ್ಸಿನ ನುಡಿ ಅವರದ್ದು.

**ವೈವಿಧ್ಯತೆ :** ಸಾವಿರಾರು ಲೋಹ ವಿಗ್ರಹಗಳನ್ನು ಮಾಡಿರುವ ನೀಲಕಂಠಾ ಚಾರ್ಯರು ಅವು ಎಲ್ಲೆಲ್ಲಿವೆ, ಹೇಗಿವೆ, ಅವುಗಳನ್ನು ಮಾಡಿಕೊಟ್ಟಕಾಲ, ಪಡೆದ ಸಂಭಾವನೆ, ಮೇಲಾಗಿ ಅವುಗಳ ಛಾಯಾಚಿತ್ರಗಳು ಯಾವುದನ್ನು ದಾಖಲಿಸಿಕೊಳ್ಳುವ

ಕೆಲಸಕ್ಕೆ ಹೋಗಲಿಲ್ಲ. ಅದು ಅವರಿಗೆ ಆಗ್ಗೆ ಬೇಕೆನಿಸಿರಲಿಲ್ಲ. ನಿತ್ಯ ಬದುಕನ್ನು ದೂಡುವುದಕ್ಕೆ ಗ್ರಾಹಕನಿಂದ ಬೇಡಿಕೆ ಬಂದದ್ದೇ ತಡ ಅದನ್ನು ಮಾಡಿಕೊಡುವತ್ತ ಗಮನಹರಿಸುವುದರಲ್ಲೇ ತಲ್ಲೀನರಾಗುತ್ತಿದ್ದರು. ಅದು ಪೂರೈಸುವುದೇ ತಡ, ಗ್ರಾಹಕ ತೆಗೆದುಕೊಂಡು ಹೋಗುವ ಚಡಪಡಿಕೆ ಒಂದೆಡೆಯಾದರೇ, ಮತ್ತೊಂದು ಕೆಲಸದ ಒತ್ತಡವು ಇರುತ್ತಿತ್ತು. ಹೀಗಾಗಿ ತಮ್ಮ ಆರು ದಶಕಗಳ ನಿರಂತರ ಲೋಹ ವಿಗ್ರಹದ ನಿರ್ಮಾಣದ ಕಾರ್ಯದಲ್ಲಿ ಸಣ್ಣ ಪುಟ್ಟ ವಿಗ್ರಹಗಳು ಸೇರಿದಂತೆ ಸಾವಿರಕ್ಕೂ ಮಿಕ್ಕು ಕೆಲಸಮಾಡಿಕೊಟ್ಟಿದ್ದರೂ ಕೆಲವನ್ನು ಮಾತ್ರ ತಮ್ಮ ಸ್ಮೃತಿ ಪಟಲದಲ್ಲಿಟ್ಟು ಕೊಂಡಿದ್ದಾರೆ.

ಸ್ಥಳೀಯವಾಗಿ ತಾವು ನೆಲೆಸಿದ ಬೆಂಗಳೂರಿನಲ್ಲಿ ಚಾಮರಾಜ ಪೇಟೆಯ ಶ್ರೀರಾಮ ಸೇವಾ ಮಂಡಲಿಗೆ ಮಾಡಿಕೊಟ್ಟ ರಾಮ, ಲಕ್ಷ್ಮಣ, ಸೀತಾ, ಆಂಜನೇಯ ಮೂರ್ತಿಗಳು ಜೊತೆಗೆ ಹನ್ನೊಂದು ಅಡಿ ಎತ್ತರದ ಅತ್ಯುತ್ತಮ ನಕಾಶೆ ಕೆಲಸವಿರುವ ಮಂಟಪ, ಬಸವನಗುಡಿಯ ದೊಡ್ಡ ಗಣಪತಿ ದೇವಾಲಯಕ್ಕೆ ಎರಡು ಅಡಿ ಎತ್ತರದ ಪಂಚಲೋಹದ ಗಣಪತಿ, ಮಾಧವನಗರಕ್ಕೆ ಪ್ರಭಾವಳಿ ಸಹಿತವಾದ ಲಕ್ಷ್ಮಿಯ ವಿಗ್ರಹ, ಇವಲ್ಲದೇ  ಖಾಸಗಿಯಾಗಿ ಮನೆಯಲ್ಲಿಟ್ಟು ಪೂಜಿಸುವ ಆಕಾಂಕ್ಷಿಗಳಿಗೆ, ಬೆಣ್ಣೆಕೃಷ್ಣ, ಕೊಳಲಕೃಷ್ಣ, ಪಾರ್ವತಿಯ ಇತರ ಶಕ್ತಿರೂಪಗಳಾದ ಚಾಮುಂಡೇಶ್ವರಿ, ರಾಜ ರಾಜೇಶ್ವರಿ, ಅಂಭಾಭವನಿ, ಲಕ್ಷ್ಮಿ, ಸರಸ್ವತಿ, ದುರ್ಗಿ, ಅನ್ನಪೂರ್ಣೇಶ್ವರಿ, ಕಾಳಿಕಾಂಬ, ಸುಬ್ರಮಣ್ಯ, ನಂದಿ, ನಾಟ್ಯಭಂಗಿಯ ಶಿಲಾಬಾಲಿಕೆಗಳು, ದೀಪ ಮಲ್ಲಿಯರು, ಪ್ರಶಸ್ತಿ ಫಲಕಗಳು, ನಟರಾಜನ ವಿವಿದ ರೀತಿಯ ಪ್ರಭಾವಳಿಗಳು, ಮುಖವಾಡಗಳು, ನಾಗರ ಹೆಡೆಗಳು ಹೀಗೆ ತ್ರಿಮಾನ (ಉದ್ದ ಅಗಲ ದಪ್ಪ)ಗಳ ಶಿಲ್ಪ ಮತ್ತು ರೇಖಿನ ಅರ್ಥಾತ್ ತಗಡಿನ ಕೆಲಸವನ್ನು ಮಾಡಿಕೊಟ್ಟಿದ್ದಾರೆ.  ಹಾಗೆಯೇ ಬಳ್ಳಾರಿಗೆ ಸುಮಾರು ನಾಲ್ಕು ಅಡಿ ಉದ್ದ, ಮೂರು ಅಡಿ ಅಗಲದ ಬೆಳ್ಳಿ ತೊಟ್ಟಿಲನ್ನು ಮಾಡಿ ಕೊಟ್ಟಿದ್ದಾರೆ.  ಹಾಗೆಯೇ ಉತ್ಸವ ಮೂರ್ತಿಗೆ ಬೇಕಾದ ಛತ್ರಿ, ಛಾಮರ, ದಂಡಗಳ ರೇಖಿನ ಕೆಲಸಗಳು ನೀಲಕಂಠಾಚಾರ್ ಅವರ ವೈವಿದ್ಯಮಯ ಲೋಹಕೆಲಸಗಳಾಗಿವೆ.

**ದೇಶ ವಿದೇಶಗಳಲ್ಲಿ :** ಇವರು ಮಾಡಿದ ಲೋಹಶಿಲ್ಪಗಳು ಕರ್ನಾಟಕದ ಹೊರಗೆ ತಮಿಳನಾಡು, ಆಂದ್ರ, ಕೇರಳ, ದೆಹಲಿ, ಕಲ್ಕತ್ತಾ, ಸೂರಜಕುಂಡ, ಪೂನಾ, ಮಧ್ಯಪ್ರದೇಶ, ಜಬ್ಬಲ್‌ಪುರ ಮುಂತಾದೆಡೆಗಳಲ್ಲಿ ಸಂಗ್ರಹವಾಗಿವೆ.

ಅಮೇರಿಕಾ ಮತ್ತು ಲಂಡನಗಳಲ್ಲಿ ಸ್ವಾಮಿ ನಿತ್ಯಾನಂದ ಆಶ್ರಮಕ್ಕೆ ಐವತ್ತಕ್ಕೂ, ಹೆಚ್ಚಿನ ಬೆಳ್ಳಿ ವಿಗ್ರಹಗಳನ್ನು ಮಾಡಿಕೊಟ್ಟಿದ್ದಾರೆ. ಇನ್ನೂ ಬೇಡಿಕೆ ಇದ್ದು ಮಾಡಲು ಸಮಯವಿಲ್ಲವೆಂದು ತಮ್ಮ ಅಸಾಯಕತೆಯನ್ನು ವ್ಯಕ್ತಪಡಿಸುತ್ತಾರೆ.

ನೀಲಕಂಠಾಚಾರ್ಯರು ತಮ್ಮ ತಾತ ಕಸ್ತೂರಾಚಾರ್‌ರವರ ಮಾರ್ಗದರ್ಶನದಲ್ಲಿ ತುಮಕೂರು ತಾಲ್ಲೂಕು ಗುಬ್ಬಿಯ ಚಿನ್ನ ಬಸವೇಶ್ವರ ದೇವಾಲಯಕ್ಕೆ ಮಾಡಿದ ಬೆಳ್ಳಿಯ ಪಾಲಿಕೆ ಅವರ ಮೊದಲ ಕೆಲಸವಾಗಿದ್ದು ಬಹುಜನರ ಮೆಚ್ಚುಗೆಗೆ ಕಾರಣ ವಾಯಿತೆನ್ನುತ್ತಾರೆ. ಮೂಡಿಗೆರೆಗೆ ಸಹ ಅನೇಕ ಉತ್ಸವ ಮೂರ್ತಿಗಳನ್ನು ಮಾಡಿ ಕೊಟ್ಟಿದ್ದಾರೆ.

ಕಮಲಾದೇವಿ ಚಟ್ಟೋಪಾದ್ಯಾಯ ಅವರ ಕೋರಿಕೆ ಮೇರೆಗೆ ಮಾಡಿಕೊಟ್ಟ ಅನೇಕ ಶಿಲ್ಪಗಳು ವಿದೇಶಿಯರಿಗೆ ಕೊಟ್ಟ ಕಾಣ್ಕೆಗಳಾಗಿದ್ದು ಭಾರತದ ಕಲಾ ಶ್ರೇಷ್ಟತೆಯನ್ನು ಬಿಂಬಿಸುವ ಲೋಹ ಶಿಲ್ಪಗಳಾಗಿವೆ.

ಮದನ ಪಲ್ಲಿಯ Arts Products of India ಎಂಬ ಸಂಸ್ಥೆಯವರು ನೀಲಕಂಠಾ ಚಾರ್ಯರಿಂದ ಹಲವಾರು ವಿಗ್ರಹಗಳನ್ನು ಮಾಡಿಸಿದ್ದಾರೆ. ದೊಡ್ಡ ದೊಡ್ಡ ಅಳತೆಯ ಪೂಜಾರ್ಹವಾದ ಲಕ್ಷ್ಮೀ, ನಟರಾಜ, ಬುದ್ಧ, ಪಂಚಮುಖ ಪರಮೇಶ್ವರ, ದಶವತಾರದ ವಿಗ್ರಹಗಳಲ್ಲದೇ, ಸೌಂದರ್ಯ ಪ್ರದರ್ಶಕವಾದಂತಹ ಬೇಲೂರಿನ ಮದನಿಕಾ ವಿಗ್ರಹಗಳನ್ನು. ವಿವಿಧ ಕಲಾವಿನ್ಯಾಸವುಳ್ಳ ರೇಖಿನ ಕೆಲಸವನ್ನು ಮಾಡಿಸಿಕೊಂಡಿದ್ದಾರೆ.

ನ್ಯೂಯಾರ್ಕ್ ಕರಕುಶಲಕಲೆಗೆ ಬಹಳ ಒತ್ತುಕೊಟ್ಟದೇಶ. ಹೊರ ದೇಶಗಳಿಂದಲೂ ಅತ್ಯುತ್ತಮ ಕರಕುಶಲ ವಸ್ತುಗಳನ್ನು ಪಡೆದು ಮಾರಾಟ ಮಾಡುತ್ತಿದ್ದವು. ನೀಲಕಂಠಾಚಾರ್ಯರ ಹೆಸರನ್ನು ಕೇಳಿದ್ದ SYDA ಸಂಸ್ಥೆಯ ವ್ಯವಸ್ಥಾಪಕ ಮೇನೇಜರ್ ಡೆವಿಡ್ ಕಂಪ್ಟನ್ ಅವರು ಕೆಲವು ವಿಗ್ರಹಗಳನ್ನು ಮಾಡಿಸಿಕೊಂಡು ಅವರ ಶಿಲ್ಪಗಳ ಬಗ್ಗೆ ಹೀಗೆ ಹೇಳುತ್ತಾರೆ. of all the many statue makers we have seen in south India, undoubtedly your work is the finest. By looking at Murthi that is made by your hands one can tell that you have indeed meditated deeply upon that God. Your work has had only the most extrodinary (fine) craftsmanship ಈ ಶ್ಲಾಘನೆ ನೀಲಕಂಠಾಚಾರ್ಯರ ಕಲಾಪ್ರತಿಭೆಗೆ ಹಿಡದ ಕೈಗನ್ನಡಿ. (ಶಿಲ್ಪಸಂಕುಲ ಪು.೧೪೪)

**ಪ್ರದರ್ಶನಗಳು ಬಹುಮಾನಗಳು :** ಮೈಸೂರಿನ ದಸರಾ ವಸ್ತು ಪ್ರದರ್ಶನಕ್ಕೆ ಚಿತ್ರವನ್ನಾಗಲೀ, ಶಿಲ್ಪವನ್ನಾಗಲೀ, ಕಳಿಸುವುದು ಹೆಮ್ಮೆಯ ಸಂಗತಿಯಾಗಿತ್ತು. ಅಲ್ಲಿ ಪ್ರದರ್ಶನಗೊಂಡು ಬಹುಮಾನ ಬಂದರೇ ಇಡೀ ರಾಜ್ಯದ ಗಮನ ಸೆಳೆದಂತೆ ಎಂಬ ಮನೋಭಾವನೆಯ ವಾತಾವರಣ ಅಂದು ಅತ್ಯಂತ ಪ್ರಚಾರದಲ್ಲಿತ್ತು. ಕ್ರಿಯಾತ್ಮಕ ಗುಣವುಳ್ಳ ಯುವ ಶಿಲ್ಪಿಗಳೆಲ್ಲರೂ ಭಾಗವಹಿಸುತ್ತಿದ್ದರು.

ನೀಲಕಂಠಾಚಾರ್ ಅವರು ಸಹ ಏನಾದರೂ ವಿಶೇಷತೆಯನ್ನು ತಮ್ಮ ಶಿಲ್ಪದ ಮೂಲಕ ಬಿಂಬಿಸಿ ದಸರಾ ವಸ್ತು ಪ್ರದರ್ಶನಕ್ಕೆ ಕಳಿಸುತ್ತಿದ್ದರು. ಕಂಚಿನ ಮದನಿಕೆ ೧೯೫೬ರಲ್ಲಿ ಪ್ರಥಮ ಬಹುಮಾನಗಳಿಸಿತು. ೧೯೬೦ರಲ್ಲಿ ಬುದ್ಧನ ವಿಗ್ರಹ ಮೈಸೂರು ಮಹಾರಾಜರ ಸ್ವರ್ಣ ಪದಕ ಗಳಿಸಿತು. ೧೯೭೪ರಲ್ಲಿ ರಚಿಸಿದ ಏಳು ಅಡಿ ಎತ್ತರದ ಪಂಚಲೋಹದ ಚೆನ್ನಕೇಶವನ ವಿಗ್ರಹ ಕರ್ನಾಟಕ ರಾಜ್ಯಪ್ರಶಸ್ತಿಗಳಿಸಿತು. ೧೯೮೫-೮೬ರಲ್ಲಿ ಸುಮಾರು ೨೦ ಅಂಗುಲ ಎತ್ತರದ ಶ್ರೀಕೃಷ್ಣನ ವಿಗ್ರಹ ಸರಸ್ವತಿ ವಿಗ್ರಹ ಮತ್ತು ಅರ್ಧನಾರೀಶ್ವರ ಮೈಸೂರು ದಸರಾ ವಸ್ತು ಪ್ರದರ್ಶನದಲ್ಲಿ ಪ್ರಶಸ್ತಿಯನ್ನು ಗಳಿಸಿದವು.

ನೀಲಕಂಠಾಚಾರ್‌ರರಿಗೆ ಅತ್ಯಂತ ಪ್ರಭಾವ ಬೀರಿದ ಹೊಯ್ಸಳ ಶಿಲ್ಪ ಶೈಲಿಯನ್ನೇ ಅನುಸರಿಸಿ ರಚಿಸಿದ ಪಂಚಲೋಹದ ವೇಣುಗೋಪಾಲ ಗಾತ್ರದಲ್ಲಿ ಕಿರಿದಾಗಿದ್ದರೂ ಪಾತ್ರದಲ್ಲಿ ಹಿರಿದಾಗಿದೆ. ಮೂವತ್ತಾರು ಅಂಗುಲದ ಈ ಲೋಹ ವಿಗ್ರಹ ರಾಷ್ಟ್ರಮಟ್ಟದ ಗೌರವಕ್ಕೆ ಪಾತ್ರರನ್ನಾಗಿಸಿತು. ೧೯೭೮ರಲ್ಲಿ ಅಖಿಲ ಭಾರತ ಹಸ್ತ ಶಿಲ್ಪ ಮಂಡಲಿ ಆಯೋಜಿಸಿದ್ದ ಪ್ರಶಸ್ತಿಪ್ರದಾನ ಸಮಾರಂಭದಲ್ಲಿ ಅಂದಿನ ರಾಷ್ಟ್ರಪತಿ ನೀಲಂ ಸಂಜೀವರೆಡ್ಡಿಯವರು ಶ್ರೀಯುತರನ್ನು ಪುರಸ್ಕರಿಸಿದರು.

ನಂತರದಲ್ಲಿ ಒಂದಾದ ಮೇಲೆ ಒಂದರಂತೆ ಪ್ರಶಸ್ತಿ ಗೌರವಗಳು ಸಂದವು. ರಾಜ್ಯ ಲಲಿತ ಕಲಾ ಅಕಾಡಮಿ ಪ್ರಶಸ್ತಿ ರಾಜ್ಯೋತ್ಸವ ಪ್ರಶಸ್ತಿ, ಕರ್ನಾಟಕದ ಅತ್ಯುನ್ನತ ಪ್ರಶಸ್ತಿಯಾದ ಜಕಣಾಚಾರಿ ಪ್ರಶಸ್ತಿ ೧೯೯೬. ಆ ವರ್ಷದಲ್ಲಿಯೇ ಮೈಸೂರಿನ ರಾಮಸನ್ ಪ್ರತಿಷ್ಠಾನವು ಸಹ ತನ್ನ ವಾರ್ಷಿಕ ಪ್ರಶಸ್ತಿ ನೀಡಿ ಗೌರವಿಸಿತು. ಅಮರ ಶಿಲ್ಪಿ ಜಕಣಾಚಾರಿ ಪ್ರಶಸ್ತಿ ಪಡೆದವರಲ್ಲಿ ಮೊದಲನೆಯವರು ಪರಮೇಶ್ವರಾಚಾರ್ ಅವರಾದರೇ ಎರಡನೇಯವರಾಗಿ ನೀಲಕಂಠಾಚಾರ್ ಅವರು. ಇದಲ್ಲದೇ ಅನೇಕ ಸಾರ್ವಜನಿಕ ಸಂಘ ಸಂಸ್ಥೆಗಳು ಸಹ ಗೌರವಿಸಿವೆ. ಕ್ರಾಪ್ಟ ಕೌನ್ಸಿಲ್ ಆಫ್ ಕರ್ನಾಟಕ ಎಂಬ ಸಂಸ್ಥೆಯ ೧೯೯೯ರಲ್ಲಿ ಬೆಂಗಳೂರಿನಲ್ಲಿ ಗೌರವಿಸಿತು. ಶಿಲ್ಪ ಕಲಾ ಅಕಾಡಮಿ

ಸದಸ್ಯರೂ ಆಗಿರುವ ನೀಲಕಂಠಾಚಾರ್ ಪ್ರಶಸ್ತಿ ಪುರಸ್ಕಾರಗಳಿಗೆ ಎಂದು ಗಮನಹರಿಸುತ್ತಿರಲಿಲ್ಲ. ತಾವಾಯಿತು ತಮ್ಮ ಕೆಲಸವಾಯಿತು. ಪ್ರಶಸ್ತಿ ಬಂದಿದೆಯೆಂದು ಹೇಳಿದಾಗಲೂ ಸಂತೋಷಿಸುತ್ತಿರಲಿಲ್ಲ ಅಥವಾ ಪ್ರದರ್ಶನಕ್ಕೆ ನಿಮ್ಮ ಕೃತಿ ಆಯ್ಕೆಯಾಗಿಲ್ಲ ಅಂದರೆ ಅದಕ್ಕೂ ವ್ಯಥೆ ಪಡುತ್ತಿರಲಿಲ್ಲ. ಸಮಚಿತ್ತ ಸಮಭಾವದ ನೀಲಕಂಠಾಚಾರ್ ಅವರು ಎಂದಿಗೂ ಕೆಲಸಕ್ಕೆ ಮಾತ್ರ ಹೆಚ್ಚಿನ ನಿಗಾವಹಿಸುವ ಶ್ರದ್ಧೆ ಅವರದು.

ಅವರ ಕುಟುಂಬವು ಸಹ ದೊಡ್ಡದೇ. ಐದು ಜನ ಗಂಡು ಮಕ್ಕಳು ನಾಲ್ಕುಜನ ಹೆಣ್ಣುಮಕ್ಕಳು. ಐದು ಜನ ಪುತ್ರರು ಶಾಲಾ ಕಾಲೇಜು ಮೆಟ್ಟಲೇರಿದ್ದರೂ ಕುಲ ಕಸುಬಾದ ಲೋಹ ಶಿಲ್ಪಗಳ ಕಡೆಗೆ ಒಲವು. ಅದನ್ನೇ ನಿತ್ಯದ ಬದುಕಿಗಾಗಿ ಲೋಹ ಶಿಲ್ಪವನ್ನೇ ಮಾಡುತ್ತಿದ್ದಾರೆ. ಓರ್ವಪುತ್ರ ಚಿತ್ರಕಲಾ ಶಿಕ್ಷಣಪಡೆದು ಸಾಂಪ್ರದಾಯಿಕ ಚಿತ್ರಕಲೆಯ (Traditional Painting) ಚಿತ್ರರಚಿಸುತ್ತಿದ್ದಾರೆ. ಪರಂಪರೆಯನ್ನು ಉಳಿಸಿ ಬೆಳೆಸುತ್ತಿದ್ದಾರೆಂಬುದು ಸಂತಸದ ವಿಷಯ. ೧೯೨೪ರಲ್ಲಿ ಜನಿಸಿದ ನೀಲಕಂಠಾಚಾರ್ಯರು ತಮ್ಮ ಎಪ್ಪತ್ತೇಳನೇ ವಯಸ್ಸಿನಲ್ಲಿಯೂ ಅತ್ಯಂತ ಲವಲವಿಕೆಯಿಂದ ವಿಗ್ರಹ ರಚನೆಯಲ್ಲಿ ತೊಡಗುತ್ತಾರೆ. ಆಲಸ್ಯವೆಂಬುದು ಅವರಿಂದ ಬಹಳದೂರ. ಶ್ರೀಯುತರು ಶತಾಯುಗಳಾಗಿ ಕಲಾ ಲೋಕಕ್ಕೆ, ಶಿಲ್ಪಕಲಾ ಪ್ರಪಂಚಕ್ಕೆ ಉತ್ತಮ ಕೊಡುಗೆ ನೀಡುವಂತಾಗಲಿ ಎಂದು ಆಶಿಸೋಣ.





ಆಳವಾದ ಅಧ್ಯಯನದ ಮೂಲಕ ಬರಹಕ್ಕೊಂದು ಮೌಲ್ಯ ತರುವ ನಿಟ್ಟಿನಲ್ಲಿ ಶಿವಲಿಂಗಪ್ಪನವರು ಮೇಲುಗೈ ಸಾದಿಸಿದ್ದಾರೆ. ಇವರು ಬರೆದ ಲೇಖನಗಳು ಪ್ರಜಾವಾಣಿ ಕನ್ನಡ ಪ್ರಭ, ಉದಯವಾಣಿ, ಸಂಯುಕ್ತ ಕರ್ನಾಟಕ ವಿಜಯ ಕರ್ನಾಟಕ, ಸುಧಾ, ತರಂಗ ಸೇರಿದಂತೆ ಅನೇಕ ನಿಯತಕಾಲಿಕೆಗಳು, ವಾರ ಮತ್ತು ಮಾಸ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಸ್ವತಃ ಛಾಯಾಗ್ರಾಹಕರು ಆಗಿರುವುದ ರಿಂದ ಲೇಖನಕ್ಕೊಂದು ಅರ್ಥಪೂರ್ಣವಾದ ಚಿತ್ರವೊದ ಗಿಸುವಲ್ಲಿ ಸಿದ್ಧಹಸ್ತರು.

ಮೈಸೂರಿನ ಶಿಲ್ಪಿ ಸಿದ್ಧಾಂತಿ ಶ್ರೀ ಸಿದ್ದಲಿಂಗ ಸ್ವಾಮಿಗಳ ಗುರುಕುಲಾಶ್ರಮದಲ್ಲಿ ಚಿತ್ರ-ಶಿಲ್ಪಗಳನ್ನು ಅಭ್ಯಾಸ ಮಾಡಿ ನಂತರ ಬೆಂಗಳೂರಿನ ಎಂ. ಟಿ. ವಿ. ಆಚಾರ್ಯರವರಲ್ಲಿ ಉನ್ನತ ಕಲಾಭ್ಯಾಸ ಮಾಡಿದ್ದಾರೆ.

ಕಲೆ, ಸಾಹಿತ್ಯ, ಚಿತ್ರ, ಶಿಲ್ಪಗಳಿಗೆ ಸಂಬಂಧಿಸಿದ ಚಟುವಟಿಕೆ ಗಳಲ್ಲಿ ಸಕ್ರೀಯವಾಗಿ ತೊಡಗಿಕೊಂಡಿರುವ ಇವರು ಪ್ರಸ್ತುತ ಅಂಚೆ ಮೂಲಕ ಕಲಾಶಿಕ್ಷಣ ನೀಡುವ ಸಂಸ್ಥೆಯಾದ ಆಚಾರ್ಯ ಚಿತ್ರಕಲಾ ಭವನದ ಗೌರವ ಪ್ರಾಚಾರ್ಯ ರಾಗಿದ್ದಾರೆ.

ಮರಳಚ್ಚಿನ ಶಿಲ್ಪ ಮತ್ತು ಥರ್ಮಾಕೋಲ್‌ಗಳಲ್ಲಿ ಶಿಲ್ಪಗಳನ್ನು ಮಾಡುವುದರ ಮೂಲಕ ಶಿಲ್ಪಿ ರಚನೆಯಲ್ಲಿ ಹೊರತನ ವನ್ನು ಕಂಡಿದ್ದಾರೆ. ಅಖಿಲ ಭಾರತ ಶಿಲ್ಪಿ ಶಿಬಿರದಲ್ಲಿ ಭಾಗವಹಿಸಿರುವುದಲ್ಲದೇ, ಮರಳಚ್ಚಿನ ಶಿಲ್ಪ ಕಾರ್ಯಾ ಗಾರವನ್ನು ಅನೇಕ ಕಡೆ ನಡೆಸಿದ್ದಾರೆ.

ಇವರು ಬರೆದಿರುವ ಶಿಲ್ಪಿ ಸಿದ್ಧಾಂತಿ ಸಿದ್ದಲಿಂಗ ಸ್ವಾಮಿಗಳ ಸಮಗ್ರ ಪರಿಚಯ, ಸಾತ್ವಿಕ ಶಿಲ್ಪಿ ನಾಗೇಂದ್ರ ಸ್ಥಪತಿ ಮತ್ತು ಸಿದ್ದಲಿಂಗಸ್ವಾಮಿಗಳ ಚಿತ್ರ ಸಂಪುಟ ಪ್ರಕಟಗೊಂಡಿವೆ.

ಶ್ರೀ ನೀಲಕಂಠಾಚಾರ್ಯರ ವ್ಯಕ್ತಿತ್ವದ ದರ್ಶನದೊಂದಿಗೆ ಲೋಹಗೆಲಸದ ಸೂಕ್ಷ್ಮ ವಿಚಾರಗಳನ್ನು ಪರಿಚಯಿಸಿದ್ದಾರೆ.